ಶ್ರೀಮನ್ಮಧ್ವ ಸಿದ್ಧಾಂತ ಪ್ರಕಾಶನ ಮಾಲಾ,
ಕೊರ್ಲಹಳ್ಳಿ







ಅಷ್ಟಮಪುಷ್ಪಮ್ ಪ್ರಥಮದಲಮ್

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತ

# ಶ್ರೀ ಮಾಯಾವಾದ ಖಂಡನಮ್

(ಟೀಕಾ ಸಹಿತಮ್)

(ಕನ್ನಡದಲ್ಲಿ ಪ್ರತಿಪದಾರ್ಥ ಭಾವಾರ್ಥ ವಿಶೇಷಾರ್ಥ ಸಹಿತ)

ಪ್ರಕಾಶನ :

ಶ್ರೀಮನ್ಮಧ್ವ ಸಿದ್ಧಾಂತ ಪ್ರಕಾಶನ ಸಮಿತಿ, ಕೊರ್ಲಹಳ್ಳಿ

ಮೌಲ್ಯ : ತತ್ವಪ್ರಕಾಶ

# ತ್ರೈಲೋಕ್ಯಾಚಾರ್ಯ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ

# ಮಾಯಾವಾದಖಂಡನಮ್

## ಶ್ರೀಜಯತೀರ್ಥವಿರಚಿತಟೀಕಾಸಹಿತಂ ॥

ಶ್ರೀಃ

ಶ್ರೀ ಗುರುಭ್ಯೋ ನಮಃ ಹರಿಃ ಓಂ

**ಟೀಕಾ:—** ಓಂ ನರಸಿಂಹಮಸಹ್ಯೋರುಪ್ರತ್ಯೂಹತಿಮಿರಾಪಹಮ್ ।
ಪ್ರಣಿಪತ್ಯ ವ್ಯಾಕರಿಷ್ಯೇ ಮಾಯಾವಾದಸ್ಯ ಖಂಡನಮ್ ॥

**ಪ್ರತಿಪದಾರ್ಥ:—** ಅಸಹ್ಯೋರು ಪ್ರತ್ಯೂಹತಿಮಿರಾಪಹಮ್ = ಅಸಹ್ಯ = ಸಹಿಸಲು ಅಸಕ್ಯವಾದಂತಹ, ಉರು = ಬಹುಸಂಖ್ಯಾಕವಾದಂತಹ, ಪ್ರತ್ಯೂಹ = ವಿಘ್ನಗಳೆಂಬ, ತಿಮಿರ = ಕತ್ತಲೆಯನ್ನು. ಅಪಹಮ್ = ನಾಶಮಾಡುವಂತಹ, ನರಸಿಂಹಮ್ = ಶ್ರೀ ನರಸಿಂಹ ದೇವರನ್ನು. ಪ್ರಣಿಪತ್ಯ = ನಮಸ್ಕರಿಸಿ, ಮಾಯಾವಾದಸ್ಯ = ಮಾಯಾವಾದವೆಂಬ ಅದ್ವೈತ ಗ್ರಂಥದ, ಖಂಡನಮ್ = ಖಂಡನ ರೂಪವಾದ ಶ್ರೀಮದಾಚಾರ್ಯರ ಗ್ರಂಥವನ್ನು ವ್ಯಾಕರಿಷ್ಯೇ = ವ್ಯಾಖ್ಯಾನ ಮಾಡುತ್ತೇನೆ.

**ವಿಶೇಷ:—** ಶ್ರೀಮಟ್ಟೀಕಾಕೃತ್ಪಾದರು, ಶ್ರೀಮದಾಚಾರ್ಯರ ಮಾಯಾವಾದ– ಖಂಡನ ಎಂಬ ಗ್ರಂಥಕ್ಕೆ ವ್ಯಾಖ್ಯಾನ ಮಾಡುವ ಪ್ರಾರಂಭದಲ್ಲಿ ಮಂಗಳಾಚರಣವನ್ನು ಮಾಡಿದ್ದಾರೆ. ಏಕೆಂದರೆ ಮೊದಲನೆಯದಾಗಿ ಪರಮಾತ್ಮನ ಅನುಗ್ರಹವಾಗಬೇಕು; ಮತ್ತು ನಿರ್ವಿಘ್ನದಿಂದ ಈ ಕಾರ್ಯವು ಪೂರ್ಣವಾಗಬೇಕು. ಲೋಕದಲ್ಲಿ ಗ್ರಂಥದ ಪ್ರಸಿದ್ಧಿ ಬರಬೇಕು. ಶಿಷ್ಯರಿಗೆ ಅದರಿಂದ ಪ್ರಯೋಜನವಾಗಬೇಕು; ಮತ್ತು ಶಿಷ್ಯರೂ ಕೂಡ ಸತ್ಕಾರ್ಯ ಪ್ರಾರಂಭದಲ್ಲಿ ಭಗವಂತನ ಆರಾಧನೆಯನ್ನು ಮಾಡಬೇಕು ಎಂದು ತಿಳಿಸಿಕೊಡುವುದಕ್ಕೋಸ್ಕರ ತಾವು ಮಂಗಳಾಚರಣವನ್ನು ಮೊದಲಿಗೆ ಮಾಡಿದ್ದಾರೆ.

"ನರಸಿಂಹಾದಿಕಂ ಅನ್ಯಚ್ಚ ದುರಿತಾದಿ ನಿವೃತ್ತಯೇ" ಎಂದು ಪ್ರಮಾಣವಿರುವುದರಿಂದ ನರಸಿಂಹ ದೇವರನ್ನು ಸ್ತೋತ್ರ ಮಾಡಿದ್ದಾರೆ.

ಸತ್ಕಾರ್ಯಕ್ಕೆ ವಿಘ್ನಗಳು ಪ್ರತಿಬಂಧಕವಾದ್ದರಿಂದ ಅವು ನಮಗೆ ಅಸಹ್ಯವಾಗಿವೆ. ಆದ್ದರಿಂದ ವಿಘ್ನಗಳಿಗೆ "ಅಸಹ್ಯತ್ವ" ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ.

ಇಲ್ಲಿ "ವ್ಯಾಖ್ಯಾನವನ್ನು ಮಾಡುತ್ತೇನೆ" ಎಂದಿದ್ದಾರೆ ಅಂದರೆ ಮೂಲ ಗ್ರಂಥದ ಬಗ್ಗೆ ಅಪ್ರತಿಪತ್ತಿ (ಅಜ್ಞಾನ), ವಿಪ್ರತಿಪತ್ತಿ (ಸಂಶಯ), ಅನ್ಯಥಾ ಪ್ರತಿಪತ್ತಿ (ಅನ್ಯಥಾ ಜ್ಞಾನ) ಇವುಗಳನ್ನು ಪರಿಹರಿಸಿ ಮೂಲ ಗ್ರಂಥದ ಅಭಿಪ್ರಾಯವು ಸರಿಯಾಗಿ ತಿಳಿಯುವಂತೆ ಅರ್ಥವನ್ನು ಬರೆಯುತ್ತೇನೆ ಎಂದರ್ಥ.

ಈ ಗ್ರಂಥವನ್ನು ವ್ಯಾಖ್ಯಾನ ಮಾಡಬೇಕಾದರೆ ವ್ಯಾಖ್ಯೇಯ ಗ್ರಥಕ್ಕೆ ವಿಷಯ, ಪ್ರಯೋಜನ. ಅಧಿಕಾರಿ ಮತ್ತು ಸಂಬಂಧ ಎಂಬ ಅನುಬಂಧ ಚತುಷ್ಟಯವಿರಬೇಕು. ಪ್ರಕೃತ ಈ ಮಾಯಾವಾದ ಖಂಡನವೆಂಬ ಗ್ರಂಥಕ್ಕೆ ಈ ಅನುಬಂಧ ಚತುಷ್ಟಯವು ಉಂಟು. ಅದ್ದರಿಂದ ಇದು ವ್ಯಾಖ್ಯಾನಕ್ಕೆ ಯೋಗ್ಯವಾಗಿದೆ. ಅದು ಹೇಗೆಂದರೆ ಶ್ರೀಮದಾಚಾರ್ಯರ ಗ್ರಂಥವು ಪ್ರಕರಣ ಗ್ರಂಥವೆನಿಸುತ್ತದೆ. ಪ್ರಕರಣ ಎಂದರೆ ಶಾಸ್ತ್ರದ ಒಂದು ಭಾಗ (ಏಕದೇಶ). ಆದ್ದರಿಂದ ಶಾಸ್ತ್ರದ ಅನುಬಂಧ ಚತುಷ್ಟಯವೇ ಇದಕ್ಕೂ ಅನ್ವಯಿಸುತ್ತದೆ. ಹೀಗೆ ವಿಷಯ ಪ್ರಯೋಜನಾಧಿಕಾರಿ ಸಂಬಂಧ ಇರುವುದರಿಂದ ಈ ಗ್ರಂಥವು ವ್ಯಾಖ್ಯೇಯವಾಗಿದೆ ಎಂದು ತಿಳಿಸಿಕೊಡುತ್ತಿದ್ದಾರೆ ಶ್ರೀ ಮಟ್ಟೀಕಾತ್ಪದರು "ಇಹಹಿ" ಎಂಬ ಗ್ರಂಥದಿಂದ:—

**ಟೀಕಾ:-** ಇಹಹಿ ವಿವಿಧ ಸಾಂಸಾರಿಕ ದುಃಖದರ್ಶನೇನ ವಿರಕ್ತಸ್ಯ ಶಮದಮಾದಿಮತೋ ಮುಮುಕ್ಷೋರಧಿಕಾರಿಣಸ್ತನ್ನಿವೃತ್ತ್ಯೈ ಪರಮಾನಂದಾವಾಪ್ತ್ಯೈಚ ಸಕಲಜೀವ ಜಡಾತ್ಮಕಾತ್ಪ್ರಪಂಚಾತ್ ಪರಮಾರ್ಥತ ಏವಾತ್ಯಂತಭಿನ್ನಂ ನಿಖಿಲಗುಣೋದಾರಂ ನಿರಸ್ತಸಮಸ್ತದೋಷಂ ಪರಬ್ರಹ್ಮ ಪ್ರತಿಪಾದಯಿತುಂ ಸಕಲಶ್ರುತಿಸ್ಮೃತೀನಾಂ ತದುಪಕರಣಭೂತ ಬ್ರಹ್ಮಮೀಮಾಂಸಾಯಾಶ್ಚ ಪ್ರವೃತ್ತಿರಿತಿ ತತ್ವಮ್।

**ಪ್ರತಿಪದಾರ್ಥ:-** ಇಹಹಿ= ಇಲ್ಲಿ ಅಂದರೆ ಅಧಿಕಾರಿ ಮತ್ತು ಅನಧಿಕಾರಿಗಳ ಸಮುದಾಯದಲ್ಲಿ, ವಿವಿಧ-ಸಾಂಸಾರಿಕ ದುಃಖದರ್ಶನೇನ=ವಿವಿಧ=ನಾನಾ ರೀತಿಯಾದಂತಹ, ಸಾಂಸಾರಿಕ=ಸಂಸಾರಕ್ಕೆ ಸಂಬಂಧಪಟ್ಟಂತಹ, ದುಃಖ=ದುಃಖಗಳ, ದರ್ಶನೇನ=ಅನುಭವದಿಂದ, ವಿರಕ್ತಸ್ಯ=ವಿರಕ್ತಿಯನ್ನು ಹೊಂದಿದ, ಶಮದಮಾದಿ ಮತಃ=ಶಮ=ಭಗವನ್ನಿಷ್ಠಾಬುದ್ಧಿಃ ("ಶಮೋಮನ್ನಿಷ್ಠತಾ ಬುದ್ಧಿಃ" (ಗೀತಾ), ಮಹಾವಿಪದ್ಯಪಿ ಅಚಲಿತ ವೈಷ್ಣವ ಸಿದ್ಧಾಂತಾಭಿಮಾನಃ), ದಮ=ಇಂದ್ರಿಯ ನಿಗ್ರಹವು, ಆದಿಮತಃ=ಇವೇ ಮೊದಲಾಗಿವುಳ್ಳಂತಹ, (ಇಲ್ಲಿ ಆದಿ ಶಬ್ದದಿಂದ ಉಪರತಿ=ವಿಷಯಾಲಂಬುದ್ಧಿ ಮತ್ತು ತಿತಿಕ್ಷಾ=ಸುಖದುಃಖ ದ್ವಂದ್ವ ಸಹಿಷ್ಣುತೆ ಇವನ್ನು ತೆಗೆದುಕೊಳ್ಳಬೇಕು), ಮುಮುಕ್ಷೋಃ=ಮೋಕ್ಷವನ್ನು ಅಪೇಕ್ಷಿಸುವಂತಹ, ಅಧಿಕಾರಿಣಃ=ಅಧಿಕಾರಿಜೀವನಿಗೆ, ತನ್ನಿವೃತ್ತ್ಯೈ=ತತ್-ಆ ಸಾಂಸಾರಿಕ ದುಃಖದ, ನಿವೃತ್ತ್ಯೈ= ನಿವೃತ್ತಿಗೋಸ್ಕರ, ಚ=ಮತ್ತು, ಪರಮಾನಂದಾವಾಪ್ತ್ಯೈ=ಪರಮ—ಉತ್ಕೃಷ್ಟವಾದ, ಆನಂದ=ಸ್ವರೂಪ ಸುಖದ, ಅವಾಪ್ತ್ಯೈ = ಆವಿರ್ಭಾವಕ್ಕೋಸ್ಕರ, ಸಕಲಜೀವಜಡಾತ್ಮಕಾತ್ಪ್ರಪಂಚಾತ್ = ಸಕಲ-ಸಮಸ್ತವಾದ, ಜೀವ-ಜೀವರು, ಜಡ=ಜಡರು (ಜಡಪದಾರ್ಥವು) ಇವರೇ, ಆತ್ಮಕಾತ್ = ಸ್ವರೂಪವಾಗಿವುಳ್ಳಂತಹ, ಪ್ರಪಂಚಾತ್ = ಪ್ರಪಂಚದ ದೆಶೆಯಿಂದ, ಪರಮಾರ್ಥತಃ = ಏವ ಪಾರಮಾರ್ಥಿಕವಾಗಿಯೇ, ಅತ್ಯಂತಭಿನ್ನಂ = ಅತ್ಯಂತವಾಗಿ ಭಿನ್ನನಾದಂತಹ, ನಿಖಿಲಗುಣೋದಾರಂ = ನಿಖಿಲ—ಸಮಸ್ತವಾದಂತಹ ಗುಣ—ಸದ್ಗುಣಗಳಿಂದ, ಉದಾರಂ—ಪರಿಪೂರ್ಣನಾದಂತಹ, ನಿರಸ್ತ ಸಮಸ್ತದೋಷಂ=ನಿರಸ್ತ-ದೂರಮಾಡಲ್ಪಟ್ಟ, ಸಮಸ್ತ=ಸಕಲ, ದೋಷಂ=ದೋಷವುಳ್ಳಂತಹ, ಪರಬ್ರಹ್ಮ= ಪರಬ್ರಹ್ಮನಾದ ಶ್ರೀಮನ್ನಾರಾಯಣದೇವರನ್ನು, ಪ್ರತಿಪಾದಯಿತುಂ=ತಿಳಿಸಿಕೊಡುವುದಕ್ಕೋಸ್ಕರ, ಸಕಲ ಶ್ರುತಿ—ಸ್ಮೃತೀನಾಂ = ಸಕಲ-ಎಲ್ಲಾ, ಶ್ರುತಿ-ಅಪೌರುಷೇಯವಾದ ವೇದಗಳು, ಸ್ಮೃತೀನಾಂ = ಪೌರುಷೇಯ ಗ್ರಂಥವಾದ ಪುರಾಣಾದಿಗಳು ಇವುಗಳ, ಚ = ಮತ್ತು, ತದುಪಕರಣಭೂತ ಬ್ರಹ್ಮಮೀಮಾಂಸಾಯಾಃ = ತತ್ = ಶ್ರುತಿಗಳಿಗೆ, ಉಪಕರಣಭೂತ=ಸಹಕಾರಿಯಾದಂತಹ, ಬ್ರಹ್ಮಮೀಮಾಂಸಾಯಾಃ=ಉತ್ತರ ಮೀಮಾಂಸಾ (ಬ್ರಹ್ಮಸೂತ್ರಗಳು) ಇವುಗಳದ್ದೂ ಕೂಡ, ಪ್ರವೃತ್ತಿಃ=ಪ್ರವೃತ್ತಿಯು, ಇತಿ=ಹೀಗೆ, ತತ್ವಂ=ಸಿದ್ಧಾಂತವು.

**ಭಾವಾರ್ಥ:-** ಸುಖರೂಪವಾದ ಮೋಕ್ಷಕ್ಕೆ ಯೋಗ್ಯರು ಮತ್ತು ಅಯೋಗ್ಯರು ಎಂಬ ಎರಡು ರೀತಿಯ ಜೀವರು ಸಂಸಾರದಲ್ಲಿ ಇದ್ದಾರೆ. ಅವರಲ್ಲಿ ಮೋಕ್ಷ,ಯೋಗ್ಯ ಜೀವರಿಗೇನೇ – ನಾನಾ ರೀತಿಯ ಸಾಂಸಾರಿಕ ದುಃಖದ ಅನುಭವದಿಂದ ವೈರಾಗ್ಯ ಬರುವುದು. ಇಂದ್ರಿಯ ನಿಗ್ರಹ, ಸುಖದುಃಖ ಸಹಿಷ್ಣುತೆ, ಇವೆಲ್ಲ ಉಂಟಾಗುವುವು. ಅಂಥ ಜೀವರ ಉದ್ಧಾರವಾಗಬೇಕಾದರೆ ಸರ್ವದೋಷದೂರನಾದ ಅನಂತಕಲ್ಯಾಣಗುಣ ಪೂರ್ಣನಾದ ಭಗವಂತನಾದ ಶ್ರೀಮನ್ನಾರಾಯಣನ ಜ್ಞಾನವು ಆಗಬೇಕು. ಇಂತಹ ಜ್ಞಾನವು, ಸಕಲ ಶ್ರುತಿಸ್ಮೃತಿಗಳು, ಶ್ರುತ್ಯರ್ಥನಿರ್ಣಾಯಕ ಬ್ರಹ್ಮಮೀಮಾಂಸಾವು ಇವುಗಳಿಂದ ಉಂಟಾಗುತ್ತದೆ ಎನ್ನುವುದು ಸರಿಯಾದ ತತ್ತ್ವವಾಗಿದೆ.

**ವಿಶೇಷ:-** ಈ ಮೇಲಿನ ವಾಕ್ಯದಿಂದ ಶಾಸ್ತ್ರದಲ್ಲಿ ಹೇಳಲ್ಪಟ್ಟ ಅನುಬಂಧ–ಚತುಷ್ಟವು ಯಾವುವೆಂದರೆ:–

(ಅ) ವಿಷಯ:– ಅನಂತ ಕಲ್ಯಾಣಗುಣ ಪರಿಪೂರ್ಣನಾದ ದೋಷದೂರನಾದ ಪರಬ್ರಹ್ಮನಾದ ಶ್ರೀಮನ್ನಾರಾಯಣ ದೇವರು.

(ಆ) ಪ್ರಯೋಜನ:– ಏಕಾಂತ ಭಕ್ತರಿಗೆ ಭಗವಂತನ ಜ್ಞಾನವೆಂಬುದೆ ಮುಖ್ಯ ಪ್ರಯೋಜನಬಾಹ್ಯ ಭಕ್ತರಿಗೆ ಮೋಕ್ಷ ಪ್ರಯೋಜನ, ಭಗವಂತನ ಜ್ಞಾನ ಅವಾಂತರ ಪ್ರಯೋಜನ.

(ಇ) ಅಧಿಕಾರಿ:– ಸಂಸಾರದಲ್ಲಿ ಬಗೆಬಗೆಯ ದುಃಖಗಳನ್ನು ಕಂಡು ವಿರಕ್ತಿಹೊಂದಿದ ಭಗವನಿಷ್ಠಾಬುದ್ಧಿ, ಇಂದ್ರಿಯ ನಿಗ್ರಹ, ವಿಷಯಾಲಂಬುದ್ಧಿ ಸುಖದುಃಖ ಸಂಹಿಷ್ಣುತೆ ಇವುಗಳುಳ್ಳಂತಹ ಮೋಕ್ಷವನ್ನು ಅಪೇಕ್ಷಿಸುವ ಜೀವನು ಅಧಿಕಾರಿಯು ಆಗುತ್ತಾನೆ.

(ಈ) ಸಂಬಂಧ:–
(೧) ವಿಷಯಕ್ಕೂ ಶಾಸ್ತ್ರಕ್ಕೂ ಪ್ರತಿಪಾದ್ಯ ಪ್ರತಿಪಾದಕಭಾವ ಸಂಬಂಧ
(೨) ಪ್ರಯೋಜನಕ್ಕೂ ಶಾಸ್ತ್ರಕ್ಕೂ ಪ್ರಯೋಜ್ಯ ಪ್ರಯೋಜಕ ಭಾವ ಸಂಬಂಧ
(೩) ಅಧಿಕಾರಿಗೂ ಶಾಸ್ತ್ರಕ್ಕೂ ಅಧ್ಯೇತೃ ಅಧ್ಯೇಯ್ಯಭಾವ ಸಂಬಂಧ
(೪) ಪ್ರಯೋಜನಕ್ಕೂ ವಿಷಯಕ್ಕೂ ಪ್ರಾಪ್ಯ ಪ್ರಾಪಕಭಾವ ಸಂಬಂಧ
(೫) ಅಧಿಕಾರಿಗೂ ಪ್ರಯೋಜನಕ್ಕೂ ಪ್ರಾಪ್ತೃಪ್ರಾಪ್ಯಭಾವ ಸಂಬಂಧ
(೬) ಅಧಿಕಾರಿಗೂ ವಿಷಯಕ್ಕೂ ಜ್ಞಾತೃ ಜ್ಞೇಯಭಾವ ಸಂಬಂಧ

ಶ್ರೀಮಟ್ಟೀಕಾಕೃತ್ಪಾದರು "ಪರಮಾರ್ಥತ ಏವಾತ್ಯಂತಭಿನ್ನಂ" ಎಂದು ಹೇಳಿ ಭೇದದಲ್ಲಿ ಪಾರಮಾರ್ಥಿಕತ್ವ ಎಂದು ಪಾರಮಾರ್ಥಿಕತ್ವ ಎಂಬ ವಿಶೇಷಣವನ್ನು ಕೊಟ್ಟಿದ್ದರಿಂದ ಮಾಯಾವಾದಿಗಳು ಅಂಗೀಕಾರ ಮಾಡಿದಂತಹ 'ವ್ಯಾವಹಾರಿಕ ಭೇದ' 'ಪ್ರಾತಿಭಾಸಿಕ ಭೇದ' ಎನ್ನುವುದು ಅಪ್ರಾಮಾಣಿಕವಾಗಿದೆ. ಭೇದ ಎಂದರೆ ಪಾರಮಾರ್ಥಿಕ ಭೇದ ಎಂದೇ ಅರ್ಥ ಎಂದು ತಿಳಿಸಿಕೊಟ್ಟಂತಾಯಿತು.

ಈ ರೀತಿ ಸಿದ್ಧಾಂತವನ್ನು ಹೇಳಿ ಮಾಯಾವಾದ ಮತದ ನಿರಾಕರಣವನ್ನು ತಿಳಿಯಲು ಅನುಕೂಲವಾಗುವುದ ಕ್ಕೋಸ್ಕರ ಮಾಯಾವಾದ ಮತದ ಪ್ರಕ್ರಿಯಾವನ್ನು ತಿಳಿಸುತ್ತಾ ಈ ಪ್ರಕರಣವನ್ನು ರಚಿಸುತ್ತಿರುವ ಶ್ರೀಮದಾಚಾರ್ಯರ ಮಂಗಲಾಚರಣಕ್ಕೆ ಅವತಾರಿಕೆಯನ್ನು ಕೊಡುತ್ತಾರೆ 'ಅಪರೇತು' ಎಂಬ ಗ್ರಂಥದಿಂದ.

**ಟೀಕಾ:-** ಅಪರೇತು ಸತ್ವಃ ಪರಬ್ರಹ್ಮಭೂತಸ್ಯೈವ ಜೀವಸ್ಯ ಅಜ್ಞಾನ ನಿಮಿತ್ತಂ ದುಃಖಾದಿ। ತತ್ ಅದ್ವೈತ ಜ್ಞಾನ ನಿವರ್ತನೀಯಮಿತ್ಯತೋಽನರ್ಥಹೇತೋರಸ್ಯ ಪ್ರಹಾಣಾಯಾತ್ಮೈಕತ್ವವಿದ್ಯಾಪ್ರತಿಪತ್ತಯೇ ಸರ್ವಶಾಸ್ತ್ರಾರಂಭ

ಇತಿ ವರ್ಣಯಂತಿ। ತನ್ಮತಮಪ್ರಾಕೃತ್ಯ ಸ್ವಮತಂ ಸಮರ್ಥಯಿತುಮಿದಂ ಪ್ರಕರಣಮಾರಭಮಾಣೋ ಭಗವನಾಚಾರ್ಯಃ ಪರಮಮಂಗಲಂ ನರಸಿಂಹಸ್ತವನಮಾದಾವಾಚರತಿ—

**ಪ್ರತಿಪದಾಥ:-** ಅಪರೇತು=ಬೇರೆಯವರಾದ ಅದ್ವೈತಿಗಳಾದರೂ, ಸ್ವತಃ=ಸ್ವಾಭಾವಿಕವಾಗಿಯೇ, ಪರಬ್ರಹ್ಮ-ಭೂತಸ್ಯೈವ=ಪರಬ್ರಹ್ಮಸ್ವರೂಪನೇ ಆಗಿರತಕ್ಕಂತಹ, ಜೀವಸ್ಯ=ಜೀವನಿಗೆ, ಅಜ್ಞಾನ ನಿಮಿತ್ತಂ=ಅಜ್ಞಾನದಿಂದ ಕಲ್ಪಿತವಾದಂತಾದ್ದು, ದುಃಖಾದಿ=ದುಃಖಾದಿಗಳು। ತತ್=ಆ ದುಃಖಕ್ಕೆ ಕಾರಣವಾದ ಅಜ್ಞಾನವು. ಅದ್ವೈತಜ್ಞಾನ ನಿವರ್ತನೀಯಮ್= ಅದ್ವೈತ-ಜೀವಬ್ರಹ್ಮೈಕ್ಯದ, ಜ್ಞಾನ-ಜ್ಞಾನದಿಂದ, ನಿವರ್ತನೀಯಮ್ ನಾಶಯೋಗ್ಯವಾಗಿದೆ, ಇತ್ಯತಃ=ಅ ಕಾರಣ ದೆಶೆಯಿಂದ, ಅನರ್ಥಹೇತೋಃ=ಅನರ್ಥ-ಅನರ್ಥಕ್ಕೆ, ಹೇತೋಃ=ಕಾರಣವಾದ, ಅಸ್ಯ= ಈ ಅಜ್ಞಾನದ (ಭೇದಜ್ಞಾನದ), ಪ್ರಹಾಣಾಯ=ನಾಶಕ್ಕೋಸ್ಕರ, ಆತ್ಮೈಕತ್ವ ವಿದ್ಯಾಪ್ರತಿಪತ್ತ್ಯೇ= ಆತ್ಮ = ಪರಮಾತ್ಮನ ದೆಸೆಯಿಂದ, ಏಕತ್ವ = ಐಕ್ಯವೆಂಬ, ವಿದ್ಯಾ = ಜ್ಞಾನದ, ಪ್ರತಿಪತ್ತ್ಯೇ= ಪ್ರಾಪ್ತಿಗೋಸ್ಕರವಾಗಿ, ಸರ್ವ ಶಾಸ್ತ್ರಾರಂಭಃ=ಎಲ್ಲಾ ಶಾಸ್ತ್ರಗಳ ಆರಂಭವು, ಇತಿ= ಹೀಗೆ, ವರ್ಣಯಂತಿ= ವರ್ಣಿಸುತ್ತಾರೆ। ತನ್ಮತಂ= ಆ ಅದ್ವೈತ ಮತವನ್ನು, ಅಪಾಕೃತ್ಯ= ನಿರಾಕರಿಸಿ, ಸ್ವಮತಂ= ತಮ್ಮದಾದ ದ್ವೈತವನ್ನು ಅಥವಾ ಸ್ವ= ಸ್ವಶಬ್ದ-ವಾಚ್ಯನಾದ ಪರಮಾತ್ಮನ ಮತಂ ಮತಿವಿಷಯವಾದ ದ್ವೈತಮತವನ್ನು, ಸಮರ್ಥಯಿತುಂ=ಸಮರ್ಥಿಸುವುದಕ್ಕಾಗಿ, ಇದಂ = ಈ ಮಾಯಾವಾದ ಖಂಡನಮ್ ಎಂಬ. ಪ್ರಕರಣಂ=ಶಾಸ್ತ್ರದ ಒಂದು ಏಕದೇಶವಾದ ಗ್ರಂಥವನ್ನು, ಆರಭಮಾಣಃ = ಪ್ರಾರಂಭಿಕಸತಕ್ಕಂತಹ, ಭಗವಾನ್ ಆಚಾರ್ಯಃ = ಷಡ್ಗುಣೈಶ್ವರ್ಯ ಸಂಪನ್ನರಾದಂತಹ. ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು, ಪರಮ ಮಂಗಲಂ=ಅತ್ಯಂತ ಉತ್ಕೃಷ್ಟ ಮಂಗಳ ಸ್ವರೂಪವಾದ, ನರಸಿಂಹಸ್ತವನಂ=ಶ್ರೀನರಸಿಂಹ ದೇವರ ಸ್ತೋತ್ರವನ್ನು, ಆದೌ=ಗ್ರಂಥಾರಂಭದಲ್ಲಿ, ಆಚರತಿ=ಆಚರಿಸುತ್ತಾರೆ.

**ತಾತ್ಪರ್ಯ:-** ಜೀವನು ಸ್ವತಃ ಬ್ರಹ್ಮನೇ ಆಗಿದ್ದಾನೆ. ಹಾಗಾದರೆ ಈ ಜೀವನಿಗೆ ಬ್ರಹ್ಮನಲ್ಲಿ ಇಲ್ಲದಂತಹ ದುಃಖಾದಿಗಳು ಹೇಗೆ ಕೂಡುತ್ತವೆ ಎಂದರೆ ಈ ಜೀವನಿಗೆ ದುಃಖಾದಿಗಳು ಇಲ್ಲವೇ ಇಲ್ಲ; ದುಃಖಾದಿಗಳು ಉಂಟು ಎಂದು ಇವನು ಅಜ್ಞಾನದಿಂದ ಕಲ್ಪಿಸಿಕೊಂಡಿದ್ದಾನೆ. ಆದ್ದರಿಂದ ಈ ಅಜ್ಞಾನವು ನಾಶವಾದರೆ ಈ ದುಃಖವು ಇಲ್ಲ ಎಂದು ಆಗುತ್ತದೆ. ಹೀಗೆ ದುಃಖ ಕಾರಣವಾದ ಅಜ್ಞಾನದ ನಾಶಕ್ಕಾಗಿ ಜೀವ ಬ್ರಹ್ಮೈಕ್ಯ ಜ್ಞಾನವು ಅವಶ್ಯಕವು ಆಗಿರುವುದರಿಂದ ಈ ಜೀವ ಬ್ರಹ್ಮೈಕ್ಯಜ್ಞಾನವನ್ನು ಉಂಟುಮಾಡಿಕೊಡುವುದಕ್ಕೋಸ್ಕರವಾಗಿ ಶಾಸ್ತ್ರಗಳು ಇರುತ್ತದೆ ಎಂದು ಮಾಯಾವಾದಿಯ ಅಭಿಪ್ರಾಯ. ಇಂತಹ ಅದ್ವೈತಮತವನ್ನು ನಿರಾಕರಣಮಾಡಿ ಸಿದ್ಧಾಂತವನ್ನು ಸಮರ್ಥನೆ ಮಾಡುವುದಕ್ಕೋಸ್ಕರ ಈ ಮಾಯಾವಾದ ಖಂಡನ ಎಂಬ ಗ್ರಂಥವನ್ನು ಪ್ರಾರಂಭಿಸತಕ್ಕಂತಹ ಶ್ರೀಮದಾಚಾರ್ಯರು ಗ್ರಂಥಾರಂಭದಲ್ಲಿ ಪರಮ ಮಂಗಲ ರೂಪವಾದ, ಸರ್ವಾನಿಷ್ಟ ನಿವೃತ್ತಿ, ಇಷ್ಟಪ್ರಾಪ್ತಿಗೆ ಕಾರಣವಾದ ಶ್ರೀನರಸಿಂಹ ದೇವರ ಸ್ತೋತ್ರವನ್ನು ಮಾಡುತ್ತಾರೆ.

**ಮೂಲ:-** ನರಸಿಂಹೋಽಖಿಲಾಜ್ಞಾನ ಮತಧ್ವಾಂತ ದಿವಾಕರಃ।
ಜಯತ್ಯಮಿತ ಸತ್‌ಜ್ಞಾನ ಸುಖಶಕ್ತಿಪಯೋನಿಧಿಃ॥

**ಪ್ರತಿಪದಾರ್ಥ:-** ಅಖಿಲಾಜ್ಞಾನಮತಧ್ವಾಂತದಿವಾಕರಃ=ಅಖಿಲ=ಸಮಸ್ತವಾದ ಜಗತ್ತು, ಅಜ್ಞಾನ=ಅಜ್ಞಾನದಿಂದ ಕಲ್ಪಿತವಾಗಿದೆ (ಇತಿ=ಇಂತೆಂದು ಹೇಳತಕ್ಕ) ಮತ=ಮತವೆಂಬ, ಧ್ವಾಂತ=ಕತ್ತಲೆಗೆ, ದಿವಾಕರಃ=ಸೂರ್ಯನಂತೆ ಇರತಕ್ಕಂತಹ, ಅಮಿತ ಸತ್‌ಜ್ಞಾನಸುಖಶಕ್ತಿಪಯೋನಿಧಿಃ = ಸತ್‌ಜ್ಞಾನ = ಯಥಾರ್ಥವಾದ ಜ್ಞಾನವು, ಸತ್‌ಸುಖ= (ದುಃಖ ಸಂಬಂಧರಹಿತವಾದ) ಸುಖವು, ಸತ್‌ಶಕ್ತಿ= (ಯಾವ ರೀತಿಯ ಪ್ರತಿಬಂಧಕವಿಲ್ಲದಂತಹ) ಶಕ್ತಿಯು (ಇವುಗಳಿಂದ), ಅಮಿತ ಪಯೋನಿಧಿಃ= ಅಮಿತ= ಅಪರಿಮಿತವಾದ, ಪಯೋನಿಧಿಃ= ಸಮುದ್ರದಂತೆ ಇರತಕ್ಕಂತಹ, ನರಸಿಂಹಃ=ಶ್ರೀಲಕ್ಷ್ಮೀನರಸಿಂಹ ದೇವರು, ಜಯತಿ ಉತ್ಕೃಷ್ಟರಾಗಿದ್ದಾರೆ.

**ತಾತ್ಪರ್ಯ:–** ಎಲ್ಲವೂ ಅಜ್ಞಾನ ಕಲ್ಪಿತವಾಗಿದೆ ಎಂದು ಹೇಳತಕ್ಕ ಮತವನ್ನು ನಾಶಮಾಡುವ ವಿಷಯದಲ್ಲಿ ಸೂರ್ಯನಂತೆ ಇರತಕ್ಕಂತಹ, ಯಥಾರ್ಥ ಜ್ಞಾನ, ದುಃಖಾಸಂಭಿನ್ನಸುಖ ಮತ್ತು ಅಪ್ರತಿಬದ್ಧ ಶಕ್ತಿ ಮೊದಲಾದ ಅನಂತಕಲ್ಯಾಣಗುಣಗಳಿಂದ ಅಪರಿಮಿತ ಸಮುದ್ರದಂತೆ ಇರತಕ್ಕಂತಹ ಶ್ರೀಲಕ್ಷ್ಮೀನರಸಿಂಹ ದೇವರು ಉತ್ಕೃಷ್ಟರಾಗಿದ್ದಾರೆ.

ಈ ಮೇಲೆ ಹೇಳಿದ ಶ್ಲೋಕದಲ್ಲಿ ಅಖಿಲಾಜ್ಞಾನಮತ ಎಂಬ ಗ್ರಂಥದಿಂದ ಅದ್ವೈತಮತದಲ್ಲಿ ಎಲ್ಲವೂ ಅಜ್ಞಾನ ಕಲ್ಪಿತ ಎಂದು ಹೇಳಲ್ಪಡುತ್ತದೆ ಎಂದು ಅರ್ಥವಾಗುತ್ತದೆ. ಹಾಗೆ ಅರ್ಥ ಹೇಳಿದರೆ ಶ್ರೀಮದಾಚಾರ್ಯರಿಗೆ "ಅನುಕ್ತೋಪಾಲಂಭತಾ" (ಹೇಳದೆ ಇದ್ದದ್ದನ್ನು ಹೇಳಿದ್ದೀರಿ ಎಂದು ಹೇಳಿ ಖಂಡಿಸುವುದು) ಎಂಬ ದೋಷ ಬರುತ್ತದೆ. ಏಕೆಂದರೆ ಮಾಯಾವಾದಿಗಳು ಬ್ರಹ್ಮ ಎಂಬ ಒಂದು ಚೈತನ್ಯವನ್ನು ಬಿಟ್ಟು ಉಳಿದದ್ದು ಎಲ್ಲವೂ ಮಿಥ್ಯ ಸುಳ್ಳು ಎಂದು ಹೇಳುತ್ತಾರೆ. ಆದ್ದರಿಂದ ಎಲ್ಲವೂ ಸುಳ್ಳು ಎಂದು ಹೇಳಿದಂತೆ ಆಗಲಿಲ್ಲ. ಹೀಗಿರುವಾಗ ಎಲ್ಲವೂ ಸುಳ್ಳು ಎಂದು ಹೇಳತಕ್ಕಂತಹ ಮತ ಅದ್ವೈತಮತ ಎಂದು ಇಟ್ಟುಕೊಂಡು ಅದಕ್ಕೆ ಕತ್ತಲೆಯ ಸಾಮ್ಯವನ್ನು ಹೇಳಿ ಆ ಮತವನ್ನು ಖಂಡಿಸಿದರೆ "ಅನುಕ್ತೋಪಾಲಂಭತಾ" ಬರುತ್ತದೆ ಎಂದು ಶಂಕೆ ಮಾಡಿದರೆ ಈ ಶ್ಲೋಕದಲ್ಲಿ ಇರುವ ಅಖಿಲ ಶಬ್ದಕ್ಕೆ ಚೈತನ್ಯವನ್ನು ಸೇರಿಸಿಕೊಂಡು ಎಲ್ಲ ಪದಾರ್ಥ ಎಂದು ಅರ್ಥ ಅಲ್ಲ. ಆದರೆ ಚೈತನ್ಯವನ್ನು ಬಿಟ್ಟು ಉಳಿದ ಎಲ್ಲ ಪದಾರ್ಥಗಳು ಎಂದು 'ಅಖಿಲ' ಶಬ್ದದ ಅರ್ಥವಾಗಿದೆ ಎಂದು ಶ್ರೀಮಟ್ಟೀಕಾಕೃತ್ಪಾದರು 'ಅಖಿಲ' ಶಬ್ದದ ಅರ್ಥವನ್ನು ನಿರೂಪಿಸಿದ್ದಾರೆ "ಅಖಿಲಂ ಚೈತನ್ಯಮಾತ್ರಾತಿರಿಕ್ತಂ" ಎಂಬ ವಾಕ್ಯದಿಂದ.

ಹೀಗೆ ಚೈತನ್ಯವನ್ನು ಬಿಟ್ಟು ಉಳಿದೆಲ್ಲ ಪ್ರಪಂಚವು ಅಜ್ಞಾನಕಲ್ಪಿತ ಎಂದು ಯಾವ ಮತವು ಹೇಳುವುದೋ ಆ ಮತವೇ ಕತ್ತಲೆಯಂತೆ ಇರುತ್ತದೆ. ಏಕೆಂದರೆ ಯಥಾರ್ಥ ಜ್ಞಾನಕ್ಕೆ ಪ್ರತಿಬಂಧಕವಾಗಿರುತ್ತದೆ. ಕತ್ತಲೆಯಲ್ಲಿ ಪದಾರ್ಥದ ಜ್ಞಾನವು ಸರಿಯಾಗಿ ಆಗುವುದಿಲ್ಲ. ಅಂದರೆ ಕತ್ತಲೆಯು ಪದಾರ್ಥಜ್ಞಾನಕ್ಕೆ ಪ್ರತಿಬಂಧಕವಾಗಿರುತ್ತದೆ. ಅದರಂತೆ ಮಾಯಾವಾದಿ ಮತವು ತತ್ವಜ್ಞಾನಕ್ಕೆ ಪ್ರತಿಬಂಧಕವಾದ್ದರಿಂದ ಕತ್ತಲೆಗೆ ಸಮಾನವಾಗಿದೆ ಎಂದು ಹೇಳಿದ್ದಾರೆ.

ಇಂತಹ ಮತವನ್ನು ನಿರಾಕರಣ ಮಾಡುವ ವಿಷಯದಲ್ಲಿ ಶ್ರೀನರಸಿಂಹ ದೇವರು ಸೂರ್ಯನಂತೆ ಇದ್ದಾರೆ.

**ಟೀಕಾ:-** ಜಯತಿ ಉತ್ಕೃಷ್ಟೋ ವರ್ತತೇ। ತಥಾಚೋಕ್ತಮ್-

**ಮೂಲ:-** "ಜಯೋರ್ಜಯಾಭಿಭವಯೋರಾದ್ಯೇಽರ್ಥೇಽಸಾವಕರ್ಮಕಃ।

ಉತ್ಕರ್ಷ ಪ್ರಾಪ್ತಿರಾದ್ಯೋಽರ್ಥೋ ದ್ವಿತೀಯೇಽರ್ಥೇ ಸಕರ್ಮಕಃ॥"

**ಪ್ರತಿಪದಾರ್ಥ:- ಟೀಕಾ:-** ಜಯತಿ = (ಶ್ರೀಮದಾಚಾರ್ಯರು ಪ್ರಯೋಗಿಸಿರುವ) ಜಯತಿ ಎಂಬ ಪದವು, ಉತ್ಕೃಷ್ಟೋ ವರ್ತತೇ = ಉತ್ಕರ್ಷವುಳ್ಳದ್ದು ಎಂದು ಅರ್ಥ ಹೇಳುತ್ತದೆ. ಈ ವಿಷಯದಲ್ಲಿ ಪ್ರಮಾಣವೇನು ಎಂಬ ಪ್ರಶ್ನೆಗೆ ಉತ್ತರ ಹೇಳುತ್ತಾರೆ ತಥಾಚೋಕ್ತಮ್ = ಅದು ಹಾಗೆ ಹೇಳಲ್ಪಟ್ಟಿದೆ. ಜಯೇಃ = 'ಜಯ' ಎಂಬ ಧಾತುವಿಗೆ. ಜಯಾಭಿಭವಯೋಃ = ಜಯ ಮತ್ತು ಅಭಿಭವ (ಪರಾಜಯಗೊಳಿಸುವುದು) ಎಂಬ ಎರಡು ಅರ್ಥಗಳಲ್ಲಿ (ಶಕ್ತಿ ಇದೆ). ಆದ್ಯೇ ಅರ್ಥೇ = ಮೊದಲನೆಯದಾದ ಜಯ ಎಂಬ ಅರ್ಥದಲ್ಲಿ ಅಸೌ = ಈ ಜಯ ಧಾತುವು, ಅಕರ್ಮಕಃ = ಕರ್ಮವಿಲ್ಲದ್ದು ಆಗಿದೆ. ಉತ್ಕರ್ಷಪ್ರಾಪ್ತಿಃ = ಉತ್ಕೃಷ್ಟತ್ವದ ಪ್ರಾಪ್ತಿಯು, ಆದ್ಯಃ ಅರ್ಥಃ = ಮೊದಲಿನ ಅರ್ಥವಾಗಿವೆ. ದ್ವಿತೀಯೇ ಅರ್ಥೇ = ಎರಡನೆಯದಾದ ಪರಾಜಯಗೊಳಿಸುವದು ಎಂಬ ಅರ್ಥದಲ್ಲಿ. ಅಸೌ = ಈ ಧಾತುವು ಸಕರ್ಮಕವಾಗಿದೆ.

ಈ ಮೇಲಿನ ಶ್ಲೋಕದಲ್ಲಿ ಆಚಾರ್ಯರು ಜಯತಿ ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಜಯ ಧಾತುವು "ರಾಜಾ

ಶತ್ರೂನ್ ಜಯತಿ (ರಾಜನು ಶತ್ರುಗಳನ್ನು ಗೆಲ್ಲುತ್ತಾನೆ)" ಇತ್ಯಾದಿ ವಾಕ್ಯಗಳಲ್ಲಿ ಸಕರ್ಮಕವಾಗಿ ಕಂಡಿದೆ. ಆದ್ದರಿಂದ ಇಲ್ಲಿಯೂ ಆಚಾರ್ಯರು ಕರ್ಮವಾಚಕ ಪದವನ್ನು ಪ್ರಯೋಗಿಸಬೇಕಾಗಿತ್ತು. ಆದರೆ ಆಚಾರ್ಯರು ಹಾಗೆ ಪ್ರಯೋಗಿಸಿಲ್ಲ. ಆದ್ದರಿಂದ ಮಾಯಾವಾದ ಖಂಡನ ಎಂಬ ಗ್ರಂಥಕ್ಕೆ ನ್ಯೂನತಾ ಎಂಬ ದೋಷವು ಬರುತ್ತದೆ ಎಂದು ಹೇಳಿದರೆ ಇದಕ್ಕೆ ಸಮಾಧಾನವೇನೆಂದರೆ ಜಯ ಧಾತುವಿಗೆ 'ಜಯ' ಮತ್ತು 'ಅಭಿಭವ' ಎಂಬ ಎರಡು ಅರ್ಥದಲ್ಲಿ ಶಕ್ತಿಯುಂಟು. ಮೊದಲನೇ ಅರ್ಥವಿರುವಾಗ ಈ ಧಾತುವು ಅಕರ್ಮಕವಾಗಿರುತ್ತದೆ. ಎರಡನೇ ಅರ್ಥದಲ್ಲಿ ಇದು ಸಕರ್ಮಕವಾಗಿರುತ್ತದೆ. ಪ್ರಕೃತದಲ್ಲಿ ಆಚಾರ್ಯರು ಅಕರ್ಮಕ ಪದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಕರ್ಮ ವಾಚಕ ಪದವನ್ನು ಹೇಳಿಲ್ಲ. ಆದ್ದರಿಂದ ನ್ಯೂನತಾ ಎಂಬ ದೋಷವಿಲ್ಲ.

**ಟೀಕಾ-:** ಸತ್ತ್ವಂ ಜ್ಞಾನಸುಖಶಕ್ತೀನಾಂ ವಿಶೇಷಣಂ । ಜ್ಞಾನಸ್ಯ ಯಥಾರ್ಥತ್ವಂ ಸತ್ತ್ವಮ್ ಸುಖಸ್ಯ ದುಃಖಾಸಂಭಿನ್ನತ್ವಮ್ । ಶಕ್ತೇರಪ್ರತಿಬದ್ಧತಾ ತಾಭಿಃ ಪಯೋನಿಧಿರಿವ । ಪಯೋನಿಧಿಃ ಪರಿಮಿತೋ ಭವತ್ಯತಃ ತಮಮಿತತ್ವೇನ ವಿಶಿನಷ್ಟಿ ।

**ಪ್ರತಿಪದಾರ್ಥ:—** ಸತ್ತ್ವಂ= ಇಲ್ಲಿ ಸತ್ತ್ವಂ ಎಂಬುದು, ಜ್ಞಾನಸುಖಶಕ್ತೀನಾಂ= ಜ್ಞಾನ, ಸುಖ ಮತ್ತು ಶಕ್ತಿ ಈ ಮೂರು ಧರ್ಮಗಳಿಗೆ, ವಿಶೇಷಣಂ = ವಿಶೇಷಣವಾಗಿದೆ । ಜ್ಞಾನಸ್ಯ = ಜ್ಞಾನಕ್ಕೆ, ಯಥಾರ್ಥತ್ವಂ ಸತ್ತ್ವಂ = ಯಥಾರ್ಥವಾಗಿರುವಿಕೆಯು ಸತ್ತ್ವ ಶಬ್ದದ ಅರ್ಥ । ಸುಖಸ್ಯ = ಸುಖಕ್ಕೆ, ದುಃಖಾಸಂಭಿನ್ನತ್ವಮ್ = ದುಃಖದಿಂದ ಅಸಂಮಿಶ್ರಣವು। ಶಕ್ತೇಃ=ಶಕ್ತಿಗೆ, ಅಪ್ರತಿಬದ್ಧತಾ=ಪ್ರತಿಬಂಧಕವಿಲ್ಲದಿರುವುದು। ತಾಭಿಃ=ಅವುಗಳಿಂದ, ಪಯೋನಿಧಿಃ ಇವ=ಸಮುದ್ರದಂತೆ (ಇದ್ದಾನೆ) । ಪಯೋನಿಧಿಃ=ಸಮುದ್ರವು, ಪರಿಮಿತೋ ಭವತಿ=ಪರಿಮಿತ ಇರುತ್ತದೆ, ಇತ್ಯತಃ = ಆ ಕಾರಣದೆಸೆಯಿಂದ, ತಮ್=ಆ ಸಮುದ್ರವನ್ನು, ಅಮಿತತ್ವೇನ =ಅಮಿತತ್ವ ಎಂಬ ವಿಶೇಷಣದಿಂದ, ವಿಶಿನಷ್ಟಿ=ವಿಶೇಷಣ ಉಳ್ಳದ್ದನ್ನಾಗಿ ಮಾಡಿ ಶಂಕಾ ಪರಿಹಾರ ಮಾಡಿದ್ದಾರೆ.

**ಭಾವಾರ್ಥ:—** ಅಮಿತ ಸಜ್ಜ್ಞಾನಸುಖ ಶಕ್ತಿ ಪಯೋನಿಧಿಃ- ಎಂಬಲ್ಲಿ "ಸತ್" ಶಬ್ದವನ್ನು "ಜ್ಞಾನ" ಶಬ್ದದ ಒಟ್ಟಿಗೆ ಪ್ರಯೋಗ ಮಾಡಿದ್ದರಿಂದ ಸತ್ತ್ವ ಎಂಬ ವಿಶೇಷಣವು ಜ್ಞಾನದಲ್ಲಿ ಮಾತ್ರ ಹೇಳಲ್ಪಟ್ಟಿದೆ ಎಂದು ತಿಳಿಯಬಾರದು. ಈ ಸತ್ತ್ವ ಎಂಬ ವಿಶೇಷಣವು ಜ್ಞಾನ, ಸುಖ, ಶಕ್ತಿ ಈ ಮೂರು ಧರ್ಮಗಳಿಗೂ ಅನ್ವಯಿಸುತ್ತದೆ. ಆಗ ಸಜ್ಜ್ಞಾನ, ಸತ್ಸುಖ, ಸಚ್ಛಕ್ತಿ ಎಂದು ಹೇಳಿದಂತಾಯಿತು. ಇವುಗಳಲ್ಲಿ ಜ್ಞಾನಕ್ಕೆ ಸತ್ತ್ವ- ಎಂದರೆ ಯಥಾರ್ಥ ಎಂದರ್ಥ. ಅಂದರೆ ಪರಮಾತ್ಮನ ಜ್ಞಾನವು ಸರ್ವದಾ, ಸರ್ವತ್ರ, ಸರ್ವ ವಿಷಯದಲ್ಲಿ ಯಥಾರ್ಥವೇ ಆಗಿರುತ್ತದೆ. ಸುಖಕ್ಕೆ ಸತ್ತ್ವ ಎಂದರೆ ದುಃಖದ ಸಂಬಂಧಾಭಾವವು ಎಂದರ್ಥ. ಸುಖಕ್ಕೆ ಯಾವ ದೇಶ, ಕಾಲದಲ್ಲಿಯೂ ದುಃಖದ ಸಂಬಂಧವೇ ಇಲ್ಲ. ಅದರಂತೆಯೇ ಪರಮಾತ್ಮನ ಶಕ್ತಿಗೆ ಸತ್ತ್ವ ಇದೆ ಎಂದರೆ ಅವನ ಶಕ್ತಿಗೆ ಪ್ರತಿಬಂಧಕವಾದದ್ದು ಯಾವುದೂ ಇಲ್ಲ ಎಂದು ತಾತ್ಪರ್ಯ.

**ವಿಶೇಷ:-** ಈ ರೀತಿ ಭಗವಂತನ ಜ್ಞಾನಸುಖ ಶಕ್ತಿಗಳಲ್ಲಿ ಸತ್ತ್ವ ಎಂಬ ವಿಶೇಷಣವನ್ನು ಕೊಟ್ಟಿದ್ದರಿಂದ ಜೀವನಲ್ಲಿ ಇರುವ ಜ್ಞಾನಸುಖ ಶಕ್ತಿಗಳನ್ನು ವ್ಯಾವೃತ್ತಿ ಮಾಡಿದಂತಾಯಿತು. ಏಕೆಂದರೆ ಜೀವನ ಜ್ಞಾನವು ಸರ್ವದಾ ಸಂಸಾರವಸ್ಥೆಯಲ್ಲಿ ಯಥಾರ್ಥವಾಗಿ ಇರುವುದಿಲ್ಲ. ಜೀವನಿಗೆ ಸುಖವು ಆಗುತ್ತಿರುವಾಗಲೂ ಸಹ ದುಃಖವು ಇದ್ದೇ ಇರುತ್ತದೆ. ಜೀವನ ಶಕ್ತಿಗೆ ಪ್ರತಿಬಂಧಕವು ಇದೆ. ಮೋಕ್ಷಾವಸ್ಥೆಯಲ್ಲಿ ಜ್ಞಾನಸುಖಶಕ್ತಿಗಳಿಗೆ ಈ ರೀತಿ ದೋಷವಿಲ್ಲದಿದ್ದರೂ ಪರಿಮಿತತ್ವ ಎಂಬ ದೋಷವು ಇದೆ. ಆದ್ದರಿಂದ ಜೀವನ ಜ್ಞಾನ, ಸುಖಶಕ್ತಿಗಳನ್ನು ಈ ಪ್ರಕೃತ ಶ್ಲೋಕದಲ್ಲಿ ಗ್ರಹಿಸಲು ಆಗುವುದಿಲ್ಲ.

ಪರಮಾತ್ಮನಿಗೆ ಸಮುದ್ರದ ದೃಷ್ಟಾಂತವನ್ನು ಕೊಟ್ಟಿದೆ. ಹಾಗಾದರೆ ಸಮುದ್ರವನ್ನು ಸಂಪೂರ್ಣವಾಗಿ ತಿಳಿಯುವಂತೆ ಪರಮಾತ್ಮನನ್ನು ಸಂಪೂರ್ಣ ತಿಳಿಯಬಹುದು ಎಂದು ಹೇಳಿದಂತಾಗುವದರಿಂದ ಅಪಸಿದ್ಧಾಂತ ಎಂಬ ದೋಷವು

ಬರುತ್ತದೆ. ಆದ್ದರಿಂದ ಪರಮಾತ್ಮನಿಗೆ ಅಪರಿಮಿತತ್ವ ಎಂಬ ವಿಶೇಷಣವನ್ನು ಕೊಟ್ಟು ಶಂಕಾ ಪರಿಹಾರ ಮಾಡಿದ್ದಾರೆ.

**ಟೀಕಾ:-** ದ್ವಿವಿಧಃ ಖಲು ಪುರುಷಾರ್ಥೋಽನಿಷ್ಟ ನಿವೃತ್ತಿರಿಷ್ಟಪ್ರಾಪ್ತಿಶ್ಚ । ತತ್ರ ಅಖಿಲೇತಿ ಮಾಯಾವಾದಾದಿ ದುರ್ಮತ ಪ್ರಸಂಜಿತಮಿಥ್ಯಾಜ್ಞಾನಾದ್ಯನಿಷ್ಟನಿವರ್ತಕತ್ವೇನ ನರಸಿಂಹಸ್ತುತಿರ್ವಿಹಿತಾ। ಅಮಿತೇತಿ ಸಮ್ಯಗ್ ಜ್ಞಾನಾದಿ ಸಮಸ್ತೇಷ್ಟ ಸಂಪಾದನ ಸಮರ್ಥತ್ವೇನೇತಿ ।

**ಪ್ರತಿಪದಾರ್ಥ:-** ಪುರುಷಾರ್ಥಃ = ಜೀವರಿಗೆ ಮಹಾಪ್ರಯೋಜವು, ದ್ವಿವಿಧಃ = ಎರಡು ರೀತಿಯದು (ಅವು ಯಾವವೆಂದರೆ) ಅನಿಷ್ಟನಿವೃತ್ತಿಃ = ಅನಿಷ್ಟ ನಾಶವು, ಚ = ಮತ್ತು, ಇಷ್ಟಪ್ರಾಪ್ತಿಃ = ಇಚ್ಛಿತವಾದ್ದರ ಪ್ರಾಪ್ತಿಯು ತತ್ರ = ಅದರಲ್ಲಿ, ಅಖಿಲೇತಿ = ಅಖಿಲಾಜ್ಞಾನ-ದಿವಾಕರಃ ಎಂಬ ಗ್ರಂಥದಿಂದ, ಮಾಯಾವಾದಾದಿದುರ್ಮತನಿವರ್ತ-ಕತ್ವೇನ = ಮಾಯಾವಾದ – ಅದ್ವೈತವಾದವೇ, ಆದಿ = ಮೊದಲಾಗಿ ಉಳ್ಳ, ದುರ್ಮತ = ದುಷ್ಟಮತದಿಂದ, ಪ್ರಸಂಜಿತ = ಪ್ರಸಕ್ತವಾಗಿರುವ, ಮಿಥ್ಯಾಜ್ಞಾನಾದಿ = ಅಯಥಾರ್ಥಜ್ಞಾನವೇ ಮೊದಲಾದ, ಅನಿಷ್ಟ = ಅನಿಷ್ಟಗಳನ್ನು, ನಿವರ್ತಕತ್ವೇನ = ಪರಿಹರಿಸುವವನು ಎಂಬ ರೀತಿಯಲ್ಲಿ, ನರಸಿಂಹಸ್ತುತಿಃ = ಶ್ರೀನರಸಿಂಹ ದೇವರ ಸ್ತೋತ್ರವು, ವಿಹಿತಾ = ಮಾಡಲ್ಪಟ್ಟಿದೆ. ಅಮಿತೇತಿ = ಅಮಿತ-ನಿಧಿಃ ಎಂಬ ಗ್ರಂಥದಿಂದ, ಸಮ್ಯಕ್‌ಜ್ಞಾನಾದಿ = ಯಥಾರ್ಥ-ಜ್ಞಾನವೇ ಮೊದಲಾಗಿ ಇರುವ, ಸಮಸ್ತ = ಎಲ್ಲ ಇಷ್ಟಸಂಪಾದನ, ಸಮರ್ಥತ್ವೇನ = ಇಷ್ಟನ್ನು ಸಂಪಾದಿಸಿಕೊಡಲು ಸಮರ್ಥನೆಂದು (ನರಸಿಂಹಸ್ತುತಿಃ = ಶ್ರೀನರಸಿಂಹ ಸ್ತೋತ್ರ ಮಾಡಲ್ಪಟ್ಟಿದೆ).

**ಭಾವಾರ್ಥ:-** ಲೋಕದಲ್ಲಿ ಅನಿಷ್ಟ ನಿವೃತ್ತಿ ಮತ್ತು ಇಷ್ಟಪ್ರಾಪ್ತಿ ಎಂಬ ಎರಡು ಪ್ರಯೋಜನಗಳು ಇರುತ್ತವೆ. ಇದರಲ್ಲಿ ಅಖಿಲಾಜ್ಞಾನ ಮತಧ್ವಾಂತ ದಿವಾಕರಃ ಎಂಬ ಶಬ್ದಗಳಿಂದ ಅಖಿಲಾಜ್ಞಾನ ಮತಧ್ವಾಂತ ದಿವಾಕರತ್ವ ಎಂಬ ವಿಶೇಷಣವನ್ನು ಪರಮಾತ್ಮನಲ್ಲಿ ಕೊಟ್ಟು ಸ್ತುತಿಸಿದ್ದಾರೆ. ಇದರಿಂದ ಸಮಸ್ತ ಅನಿಷ್ಟ ನಿವೃತ್ತಿ ಕರ್ತೃತ್ವ ಎಂಬ ಧರ್ಮವನ್ನು ಪರಮಾತ್ಮನಲ್ಲಿ ಹೇಳಿದಂತಾಯಿತು. ಇನ್ನು ಅಮಿತ ಸತ್‌ಜ್ಞಾನ ಸುಖಶಕ್ತಿ ಪಯೋನಿಧಿಃ ಎಂಬ ಗ್ರಂಥದಿಂದ ಅಪರಿಮಿತವಾದ ಸತ್ಸುಖಾದಿಗಳಿಂದ ಅಪರಿಮಿತ ಸಮುದ್ರದಂತಿರುವ ನರಸಿಂಹದೇವರು ಎಂದು ಹೇಳಿದ್ದರಿಂದ ಸರ್ವೇಷ್ಟಪ್ರಾಪ್ತಕತ್ವ ಎಂಬ ಧರ್ಮವನ್ನು ಹೇಳಿದಂತಾಯಿತು. ಹೀಗೆ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿ ಎಂಬ ಎರಡು ಪ್ರಯೋಜನಗಳು ನರಸಿಂಹದೇವರಿಂದ ಆಗುತ್ತಿರುವುದರಿಂದ ಶ್ರೀನರಸಿಂಹದೇವರನ್ನು ಸ್ತೋತ್ರಮಾಡಿರುತ್ತಾರೆ.

**ಟೀಕಾ:-** ಅಖಿಲಾಜ್ಞಾನ ಮತಧ್ವಾಂತಸಮಮಿತ್ಯೇತದಸಹಮಾನ ಆಹ- "ಜೀವಬ್ರಹ್ಮಣೋರೇಕತ್ವಂ ಹಿ ಶ್ರುತಿ-ತನ್ಮೀಮಾಂಸಾಭಿಃ ತಾತ್ಪರ್ಯತಃ ಪ್ರತಿಪಾದ್ಯತೇ ನ ಚೈತಚ್ಚೇತನಾತಿರಿಕ್ತಸ್ಯ ಸಮಸ್ತಸ್ಯ ಅಜ್ಞಾನಕಲ್ಪಿತತಯಾ ವಿನಾ ಉಪಪದ್ಯತೇ ತತ್ಕಥಮೇವಮುಚ್ಯತೇ" ಇತಿ ।

**ಪ್ರತಿಪದಾರ್ಥ:-** ಅಖಿಲ = ಎಲ್ಲವೂ, ಅಜ್ಞಾನ = ಅಜ್ಞಾನದಿಂದ ಕಲ್ಪಿತದಾಗಿದೆ, ಇತಿ = ಇಂತೆಂದು (ಇರತಕ್ಕಂತಹ) ಮತಂ = ಮತವು, ಧ್ವಾಂತಸಮಂ = ಕತ್ತಲೆಯಿಂದ ಸಮವಾಗಿದೆ, ಇತಿ = ಈ ರೀತಿಯಾಗಿ, ಏತತ್ = (ಆಚಾರ್ಯರು) ಹೇಳಿದ್ದನ್ನು, ಅಸಹಮಾನಃ = ಸಹನಮಾಡದಂತಹ (ಮಾಯಾವಾದಿಯು), ಆಹ = ಹೇಳಿದನು – ಜೀವ-ಬ್ರಹ್ಮಣೋಃ = ಜೀವ ಮತ್ತು ಬ್ರಹ್ಮರಿಗೆ, ಏಕತ್ವಂ = ಅಭೇದವು, ಶ್ರುತಿ = ಅಪೌರುಷೇಯ ವೇದವು, ತನ್ಮೀಮಾಂಸಾ = ತತ್ = ಆ ಶ್ರುತ್ಯರ್ಥ ನಿರ್ಣಾಯಕವಾದ ಮೀಮಾಂಸಾ-ಬ್ರಹ್ಮಸೂತ್ರಗಳು, ತಾಭಿಃ = ಇವುಗಳಿಂದ, ತಾತ್ಪರ್ಯತಃ = ತಾತ್ಪರ್ಯವಾಗಿ, ಪ್ರತಿಪಾದ್ಯತೇ = ಪ್ರತಿಪಾದಿಸಲ್ಪಡುತ್ತದೆ । ಏತತ್ = ಈ ಜೀವಬ್ರಹ್ಮೈಕ್ಯವು, ಚೇತನಾತಿರಿಕ್ತಸ್ಯ = ಚೇತನನಾದ ಬ್ರಹ್ಮನ ದೆಸೆಯಿಂದ ಭಿನ್ನವಾದಂತಹ, ಸಮಸ್ತಸ್ಯ = ಎಲ್ಲ ಪ್ರಪಂಚಕ್ಕೆ, ಅಜ್ಞಾನ-ಕಲ್ಪಿತಯಾ = ಅಜ್ಞಾನ ಕಲ್ಪಿತತ್ವ ಎಂಬ ಧರ್ಮದಿಂದ, ವಿನಾ = ಬಿಟ್ಟು, ನ ಚ ಉಪಪದ್ಯತೇ = ಕೂಡುವುದಿಲ್ಲ । ತತ್ = ಆ ಕಾರಣದೆಸೆಯಿಂದ, ಏವಂ = ಈ ರೀತಿಯಾಗಿ ಅಖಿಲಾಜ್ಞಾನ ಮತವು ಧ್ವಾಂತ ಸಮವು ಎಂದು, ಕಥಂ = ಹೇಗೆ, ಉಚ್ಯತೇ = ಹೇಳಲ್ಪಡುತ್ತದೆ.

**ಭಾವಾರ್ಥ:-** ಕತ್ತಲೆಯು ಹೇಗೆ ತತ್ವಜ್ಞಾನಕ್ಕೆ ಪ್ರತಿಬಂಧಕವೋ ಹಾಗೆ ಅದ್ವೈತ ಮತವೂ ಕೂಡ ತತ್ವಜ್ಞಾನಕ್ಕೆ ಪ್ರತಿಬಂಧಕವಾದ್ದರಿಂದ ಅದಕ್ಕೆ ತತ್ವಜ್ಞಾನದ ಕಾರಣತ್ವವು ಕೂಡುವುದಿಲ್ಲ ಎಂಬ ಅಭಿಪ್ರಾಯದಿಂದ ಆಚಾರ್ಯರು ಅದ್ವೈತ ಮತವು ಕತ್ತಲೆಗೆ ಸಮಾನ ಎಂದು ಹೇಳಿದ್ದನ್ನು ವಾದಿಗೆ ಸಹಿಸಲು ಆಗಲಿಲ್ಲ. ಏಕೆಂದರೆ ಅವನು ತನ್ನ ಮತಕ್ಕೆ ತತ್ವಜ್ಞಾನದ ಕಾರಣತ್ವವನ್ನು ಹೇಳುತ್ತಾ ತತ್ವಜ್ಞಾನಕ್ಕೆ ಪ್ರತಿಬಂಧಕತ್ವ ಇಲ್ಲ ಎಂದು ಹೇಳುತ್ತಿದ್ದಾನೆ. ಹೇಗೆಂದರೆ ಜೀವಬ್ರಹ್ಮರ ಐಕ್ಯವೇ ತತ್ವವಾಗಿದೆ. ಯದ್ಯಪಿ ಶ್ರುತ್ಯಾದಿಗಳನ್ನು ಆಪಾತತಃ ನೋಡಿದಾಗ ಜೀವ-ಬ್ರಹ್ಮೈಕ್ಯವು ಬೋಧಿತವಾಗುವ ದಿಲ್ಲ. ಆದರೆ ಆ ಶ್ರುತಿಮೀಮಾಂಸಗಳ ತಾತ್ಪರ್ಯವನ್ನು ವಿಚಾರಮಾಡಿದಾಗ ಜೀವಬ್ರಹ್ಮರ ಐಕ್ಯದಲ್ಲಿ ತಾತ್ಪರ್ಯವೆಂದು ಸಿದ್ಧವಾಗುತ್ತದೆ.

ಹೇಗೆಂದರೆ ತಂದೆಯು ಮಗನಿಗೆ ಕೋಪದಿಂದ "ನೀನು ಹಾಳಾಗಿಹೋಗು, ನೀನು ಮನೆ ಬಿಟ್ಟು ಹೋಗು ಎಂದು ಕೆಲವು ವೇಳೆ ಬಿರುಸು ನುಡಿಗಳನ್ನಾಡಿದಾಗ ಈ ಶಬ್ದಗಳಿಗೆ ಮೇಲೆ ತೋರಿದ ಅರ್ಥದಲ್ಲಿ ತಾತ್ಪರ್ಯವಿರದೆ ಮಗನಿಗೆ ಒಳ್ಳೆಯದಾಗಬೇಕು ಎಂಬ ಅರ್ಥದಲ್ಲಿ ತಾತ್ಪರ್ಯವಿರುವುದು ಹೇಗೆ ಕಂಡಿದೆಯೋ ಅದರಂತೆಯೇ ಈ ಶ್ರುತಿಮೀಮಾಂಸಗಳಿಗೂ ಕೂಡ ಜೀವಬ್ರಹ್ಮರ ಐಕ್ಯದಲ್ಲಿಯೇ ತಾತ್ಪರ್ಯವಿದೆ ಎಂದು ಸಿದ್ಧವಾಗುತ್ತದೆ. ಹೀಗೆ ಜೀವಬ್ರಹ್ಮರ ಐಕ್ಯವು ಶಾಸ್ತ್ರದಿಂದ ಸಿದ್ಧವಾದ ನಂತರ ಅಂದರೆ ಹೀಗೆ ಶಾಸ್ತ್ರಗಳಿಂದ ಜೀವಬ್ರಹ್ಮೈಕ್ಯವು ತಾತ್ಪರ್ಯ ವೆಂದು ಬೋಧಿತವಾಗಿದೆ ಎಂದು ಸಿದ್ಧವಾದ ನಂತರ ಅದನ್ನಂತು ಬಿಡಲು ಬರುವುದಿಲ್ಲ, ಆದರೆ ನಮಗೆ ಜೀವಬ್ರಹ್ಮರ ಭೇದದ ಅನುಸಂಧಾನವೇ ಉಂಟು. ಹೀಗಿರುವಾಗ ಐಕ್ಯವನ್ನು ಹೇಗೆ ಸರಿಹೊಂದಿಸುವುದು ಎಂದರೆ ಬ್ರಹ್ಮಭಿನ್ನವಾದ ಎಲ್ಲ ಪ್ರಪಂಚಕ್ಕೆ ಮಿಥ್ಯಾತ್ವವನ್ನು (ಅಜ್ಞಾನ ಕಲ್ಪಿತತ್ವವನ್ನು) ಹೇಳಿದರೆ ಸರಿ. ಹೀಗೆ ಅಜ್ಞಾನ ಕಲ್ಪಿತತ್ವವನ್ನು ಹೇಳುವುದು ಜೀವಬ್ರಹ್ಮೈಕ್ಯವೆಂಬ ತತ್ವದ ಜ್ಞಾನಕ್ಕೆ ಕಾರಣವೇ ಆಗಿರುವುದರಿಂದ ಅದ್ವೈತಮತವು ತತ್ವಜ್ಞಾನಕ್ಕೆ ಪ್ರತಿಬಂಧಕ ಎಂದು ಹೇಗೆ ಹೇಳುವಿರಿ ಎಂದು ಅದ್ವೈತಿಯು ಕೇಳುತ್ತಾನೆ.

**ಟೀಕಾ:-** ಮೈವಮ್। ಸ್ಯಾದೇತದೇವಂ ಯದಿ ಜೀವಬ್ರಹ್ಮಣೋರೈಕ್ಯಪ್ರತಿಪಾದಕತ್ವಂ ವೇದತನ್ಮೀಮಾಂಸಯೋರು–ಪಪನ್ನಂ ಸ್ಯಾತ್। ನ ಚೈತದಸ್ತಿ। ತತ್ಪರತಯಾ ವ್ಯಾಖ್ಯಾನೇ ವೇದಾದೇರನಾರಂಭಣೀಯತ್ವಪ್ರಸಂಗಾತ್। ತತ್ಕಥಂ= ಇತಿ, ತತ್ರಾಹ॥

**ಪ್ರತಿಪದಾರ್ಥ:-** ಏವಂ = ಈ ರೀತಿಯಾಗಿ ಹೇಳುವುದು, ಮಾ = ಬೇಡ (ಸರಿಯಲ್ಲ), ಏತತ್ = ನೀನು ಹೀಗೆ ಹೇಳಿದ್ದು, ಏವಂ= ಯುಕ್ತವು, ಸ್ಯಾತ್ = ಆಗಲಿ। ಯದಿ= ಒಂದು ವೇಳೆ, ಜೀವಬ್ರಹ್ಮಣೋಃ=ಜೀವಬ್ರಹ್ಮರಿಗೆ ಐಕ್ಯಪ್ರತಿಪಾದಕತ್ವಂ = ಐಕ್ಯಪ್ರತಿಪಾದಕತ್ವವು, ವೇದತನ್ಮೀಮಾಂಸಯೋಃ = ವೇದ = ವೇದವು ಮತ್ತು, ತತ್ = ಅದಕ್ಕೆ (ನಿರ್ಣಾಯಕವಾದ), ಮೀಮಾಂಸಯೋಃ= ಉತ್ತರ ಮೀಮಾಂಸಾ (ಬ್ರಹ್ಮಸೂತ್ರ)ಗಳಿಗೆ, ಉಪಪನ್ನಮ್–ಸ್ಯಾತ್ = ಯುಕ್ತವು ಆಗಿದ್ದರೆ। ಏತತ್ = ಈ ಜೀವಬ ಹ್ಮೈಕ್ಯತ್ವವು, ನ ಚಾಸ್ತಿ= ಇರುವುದಿಲ್ಲ। ತತ್ಪರತಯಾ = ಜೀವಬ್ರಹ್ಮೈಕ್ಯ ವಿಷಯವಾಗಿ (ವೇದಾದಿಗಳನ್ನು), ವ್ಯಾಖ್ಯಾನೇ= ವ್ಯಾಖ್ಯಾನಮಾಡಿದರೆ, ವೇದಾದೇಃ= ವೇದಾದಿ ಗಳಿಗೆ, ಅನಾರಂಭಣೀಯತ್ವ = ಅನಾರಂಭಣೀಯತ್ವದ (ಪ್ರೇಕ್ಷಾವಂತರಿಂದ ಮಾಡಲ್ಪಟ್ಟ ಸ್ವೀಕಾರಕ್ಕೆ ವಿಷಯ ಆಗದಂತಿರುವ). ಪ್ರಸಂಗಾತ್= ಪ್ರಸಂಗ ಬಂದಿರುವುದರಿಂದ । ತತ್= ಆ ಅನಾರಂಭಣೀಯತ್ವವು, ಕಥಂ= ಹೇಗೆ ಇತಿ = ಇಂತೆಂದರೆ, ತತ್ರ = ಆ ಅನಾರಂಭಣೀಯತ್ವ ವಿಷಯದಲ್ಲಿ, ಆಹ = ಯುಕ್ತಿಯನ್ನು ಹೇಳುತ್ತಾರೆ ಶ್ರೀಮದಾಚಾರ್ಯರು—

**ಭಾವಾರ್ಥ:-** ಈ ರೀತಿಯಾಗಿ ಶ್ರುತಿಗಳಿಂದ ತಾತ್ಪರ್ಯವಾಗಿ ಭೋದಿತವಾದ ಐಕ್ಯವನ್ನು ಸರಿಪಡಿಸಲು ಬ್ರಹ್ಮಾತಿರಿಕ್ತ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳಬೇಕೆಂದು ಹೇಳುವುದು ಸರಿಯಲ್ಲ. ಏಕೆಂದರೆ ಒಂದು ವೇಳೆ ಶಾಸ್ತ್ರಗಳಿಗೆ ಜೀವ–

ಬ್ರಹ್ಮೈಕ್ಯದಲ್ಲಿ ತಾತ್ಪರ್ಯವುಂಟು ಎಂದು ಸಿದ್ಧವಾಗಿದ್ದರೆ ಮಾತ್ರ ಆ ಐಕ್ಯ ರಕ್ಷಣೆಗೋಸ್ಕರ ಜಗನ್ಮಿಥ್ಯಾತ್ವವನ್ನು ಹೇಳ ಬಹುದಿತ್ತು. ಜೀವ ಬ್ರಹ್ಮೈಕ್ಯವು ಶಾಸ್ತ್ರದಿಂದ ಪ್ರತಿಪಾದಿತವಾಗಿಲ್ಲ. ಒಂದು ವೇಳೆ ಶಾಸ್ತ್ರವು ಜೀವಬ್ರಹ್ಮೈಕ್ಯ ವನ್ನು ತಾತ್ಪರ್ಯವಾಗಿ ಹೇಳುತ್ತದೆ ಎಂದು ಆ ಶ್ರುತಿಗಳನ್ನು ಐಕ್ಯ ಹೇಳುವಂತೆ ವ್ಯಾಖ್ಯಾನವನ್ನು ಮಾಡಿದರೆ ಶಾಸ್ತ್ರಕ್ಕೆ ಅನಾರಂಭಣೀಯತ್ವವನ್ನು ಅಂದರೆ ಜ್ಞಾನಿಗಳಿಂದ ಅಗ್ರಾಹ್ಯತ್ವವನ್ನು ಹೇಳಬೇಕಾದ ಪ್ರಸಂಗವು। ಬರುತ್ತದೆ.

1) ಐಕ್ಯಪ್ರತಿಪಾದಕತ್ವವನ್ನು ಶಾಸ್ತ್ರಕ್ಕೆ ಹೇಳಿದರೆ ಶಾಸ್ತ್ರವು ಅನಾರಂಭಣೀಯವು ಏಕೆ ಆಗಬೇಕು ?

2) ಐಕ್ಯಪ್ರತಿಪಾದಕತ್ವಕ್ಕೂ ಅನಾರಂಭಣೀಯತ್ವಕ್ಕೂ ಏನು ಸಂಬಂಧ ?

ಹೀಗೆ ಶಂಕಾ ಬಂದರೆ ಶ್ರೀಮದ್ವಾಚಾರ್ಯರು "ಐಕ್ಯಪ್ರತಿಪಾದಕತ್ವವನ್ನು ಹೇಳುವುದರಿಂದ ಅನಾರಂಭಣೀಯತ್ವವು ಹೇಗೆ ಬರುತ್ತದೆ" ಎಂಬ ವಿಷಯದಲ್ಲಿ ಹೇಳುತ್ತಿದ್ದಾರೆ—

**ಮೂಲ:-** "ವಿಮತಮನಾರಂಭಣೀಯಂ । ಅನ್ಯಥಾ ಪ್ರತಿಪಾದಕತ್ವಾತ್ ಯದಿತ್ಥಂ
ತತ್ತಥಾ ಯಥಾ ಸಂಪ್ರತಿಪನ್ನಮ್ ।"

**ಪ್ರತಿಪದಾರ್ಥ:-** ವಿಮತಂ= ಸಂಶಯದಲ್ಲಿ ವಿಶೇಷ್ಯವಾದದ್ದು. ಅನಾರಂಭಣೀಯಂ= ಪ್ರೇಕ್ಷಾವಂತರಾದ ಜನರಿಂದ ಮಾಡಲ್ಪಟ್ಟ ಸ್ವೀಕಾರಕ್ಕೆ ಅಯೋಗ್ಯವಾಗಿದೆ। ಅನ್ಯಥಾ=ಇಲ್ಲದೇ ಇರುವುದನ್ನು ಉಂಟು ಎಂಬುದಾಗಿ: ಇರುವುದನು ಇಲ್ಲ ಎಂಬುದಾಗಿ, ಪ್ರತಿಪಾದಕತ್ವಾತ್= ಹೇಳುತ್ತಿರುವುದರಿಂದ। ಯತ್= ಯಾವುದು. ಇತ್ಥಂ= ಈ ರೀತಿಯಾಗಿ ಅನ್ಯಥಾಪ್ರತಿಪಾದಕವಾಗಿರುವುದೋ, ತತ್= ಅದು, ತಥಾ= ಅನಾರಂಭಣೀಯವಾಗಿರುತ್ತದೆ । ಯಥಾ= ಹೇಗೆ ಸಂಪ್ರತಿಪನ್ನಮ್= ಅನ್ಯಥಾಪ್ರತಿಪಾದಕವಾದದ್ದು ಯಾವುದೋ ಅದು ಅನಾರಂಭಣೀಯವಾಗಿದೆ ಎಂದು ಉಭಯ ವಾದಿಗಳಿಗೆ ಸಮ್ಮತವಾಗಿರುವುದೋ ಅದೇ ದೃಷ್ಟಾಂತವು।

**ಭಾವಾರ್ಥ:-** ವೇದಾದಿ ಶಾಸ್ತ್ರವು ಅನ್ಯಥಾಪ್ರತಿಪಾದಕವಾದರೆ ಅನಾರಂಭಣೀಯವಾಗಬೇಕಾಗುತ್ತದೆ ಏಕೆಂದರೆ ಲೋಕದಲ್ಲಿ ಅನ್ಯಥಾಪ್ರತಿಪಾದಕವಾದ ಗ್ರಂಥಗಳು ಅನಾರಂಭಣೀಯವಾಗಿರುವುದು ಕಂಡಿರುತ್ತದೆ ಎಂದು ವಾದಿ ಪ್ರತಿವಾದಿಗಳಿಗೆ ಸಮ್ಮತವಾದದನ್ನ ದೃಷ್ಟಾಂತದಿಂದ ತಿಳಿಯಬಹುದು.

**ಟೀಕಾ:-** ವಿಮತಂ ಆರಂಭಣೀಯತ್ವಾನಾರಂಭಣೀಯತ್ವಾಭ್ಯಾಂ ವಿಮತಿ ವಿಷಯೀಭೂತಂ ಶ್ರುತಿತನ್ಮೀಮಾಂಸಾ-ಶಾಸ್ತ್ರಮ್। ಶಾಸ್ತ್ರಮನಾರಂಭಣೀಯ ಮಿತ್ಯೇವೋಕ್ತೇ ಬೌದ್ಧಾದಿಶಾಸ್ತ್ರಾಣಾಮನಾರಂಭಣೀಯತ್ವಸ್ಯ ಪರೇಣಾಭ್ಯುಪ ಗತತ್ವಾತ್ ಇಷ್ಟಪಾದನಮೇವ ತತ್ಸ್ಯಾತ್ ।

**ಪ್ರತಿಪದಾರ್ಥ:-** ವಿಮತಂ – ಶ್ರಿಮದ್ವಾಚಾರ್ಯರು ಪ್ರಯೋಗಮಾಡಿರುವ 'ವಿಮತಂ' ಎಂಬ ಶಬ್ದದ ಅರ್ಥವು. ಆರಂಭಣೀಯತ್ವಾನಾರಂಭಣೀಯತ್ವಾಭ್ಯಾಂ= ಆರಂಭಣೀಯತ್ವ. ಅನಾರಂಭಣೀಯತ್ವ ಎಂಬ ಧರ್ಮಗಳಿಂದ. ವಿಮತಿ= ಸಂಶಯಕ್ಕೆ, ವಿಷಯೀಭೂತಂ= ವಿಷಯವಾದಂಥಾದ್ದು. ಶ್ರುತಿತನ್ಮೀಮಾಂಸಾಶಾಸ್ತ್ರಮ್= ವೇದವು ಮತ್ತು ಆಶ್ರುತ್ಯರ್ಥನಿರ್ಣಾಯಕವಾದಂತಹ ಶಾಸ್ತ್ರವು, ಶಾಸ್ತ್ರಂ ಶಾಸ್ತ್ರವು. ಅನಾರಂಭಣೀಯಂ ಅನಾರಂಭಣೀಯ ವಾಗಿರುತ್ತದೆ. ಇತ್ಯೇವ = ಈ ರೀತಿಯಾಗಿಯೇ. ಉಕ್ತೇ (ಸತಿ) = ಹೇಳಲ್ಪಟ್ಟರೆ. ಬೌದ್ಧಾದಿಶಾಸ್ತ್ರಾಣಾಂ = ಬೌದ್ಧ = ಬೌದ್ಧಶಾಸ್ತ್ರವೇ ಆದಿ= ಮೊದಲಾಗಿವುಳ್ಳಂತಹ, ಶಾಸ್ತ್ರಾಣಾಂ= (ಚಾರ್ವಾಕಾದಿ) ಶಾಸ್ತ್ರಗಳಿಗೆ. ಅನಾರಂಭ-ಣೀಯತ್ವಸ್ಯ = ಅನಾರಂಭಣೀಯತ್ವಕ್ಕೆ.. ಪರೇಣ = ಬೇರೆ ವಾದಿಯಿಂದ (ನ್ಯಾಯಾವಾದಿಯಿಂದ). ಅಭ್ಯುಪಗ-ತ್ವಾತ್ =ಅಂಗೀಕಾರವಿಷಯತ್ವವಿರುವುದರಿಂದ, ತತ್ = ಆ ಅನಾರಂಭಣೀಯತ್ವದ ಆಪಾದನವು. ಇಷ್ಟಾಪಾದನ-ಮೇವಸ್ಯಾತ್ = ಇಷ್ಟವಾದ ಧರ್ಮದ ಆಪಾದನವೇ ಆಗಿದೆ ।

**ಭಾವಾರ್ಥ:-** ಇಲ್ಲಿ ಶ್ರೀಮದಾಚಾರ್ಯರು 'ವಿಮತಂ' ಎಂದು ಶಬ್ದಪ್ರಯೋಗವನ್ನು ಮಾಡಿದ್ದಾರೆ. ವಿಮತಂ ಎಂದರೆ ಸಂಶಯಕ್ಕೆ ವಿಷಯ ಎಂದು ಅರ್ಥ. ಹಾಗಾದ ಪಕ್ಷದಲ್ಲಿ ಸಂಶಯಗಳು ಅನೇಕ ರೀತಿಯಲ್ಲಿ ಇರುವುದರಿಂದ ಇಲ್ಲಿ ವಿಮತಂ ಎಂಬ ಶಬ್ದದಿಂದ ಯಾವ ಸಂಶಯವನ್ನು ತೆಗೆದುಕೊಳ್ಳಬೇಕು ಎಂಬ ಆಕಾಂಕ್ಷೆ ಹುಟ್ಟಿದ್ದರಿಂದ ಶ್ರೀಮಟ್ಟೀಕಾಕೃತ್ಪಾದರು ಪ್ರಕೃತದಲ್ಲಿ ತಿಳಿಯಬೇಕಾಗಿರುವ ವಿಮತಂ ಎಂಬ ಶಬ್ದದ ಅರ್ಥವನ್ನು ನಿರೂಪಿಸುತ್ತಿದ್ದಾರೆ ಇದು ಆರಂಭಣೀಯವೋ ಅಥವಾ ಅಲ್ಲವೋ ಎಂಬ ಸಂಶಯಕ್ಕೆ ವಿಷಯವಾದಂತಾದ್ದು ಶ್ರುತಿತನ್ಮೀಮಾಂಸಾಶಾಸ್ತ್ರವು ಎಂದು. ಹಾಗಾದರೆ 'ವಿಮತಂ' ಎಂದು ಹೇಳುವಬದಲು 'ಶಾಸ್ತ್ರಂ' ಎಂದಷ್ಟೆ ಶಬ್ದ ಪ್ರಯೋಗ ಮಾಡಿ ಅನಾರಂಭಣೀಯತ್ವವನ್ನು ಸಾಧಿಸಿದರೆ ಏನು ತಪ್ಪಾಗುತ್ತದೆ? ಎಂಬ ಪ್ರಶ್ನೆಗೆ ಉತ್ತರವೇನೆಂದರೆ ಪ್ರಕೃತ ಆಚಾರ್ಯರು ಶಾಸ್ತ್ರಕ್ಕೆ ಅನಾರಂಭಣೀಯತ್ವವನ್ನು ಆಪತ್ತಿ ಮಾಡುತ್ತಿದ್ದಾರೆ. ಯಾವ ಧರ್ಮವನ್ನು ಆಪಾದಿಸಬೇಕೋ ಆ ಧರ್ಮವು ಪ್ರತಿವಾದಿಗೆ ಇಷ್ಟವಾಗಿರಬಾರದು. ಅಂದರೆ ವಾದಿಗೆ ಅನಿಷ್ಟವಾಗಿರಬೇಕು. ಅಂದರೆ ತರ್ಕದಲ್ಲಿ "ಆಪಾದ್ಯಸ್ಯ ಅನಿಷ್ಟತಾ" ಎಂಬ ಅಂಗ ಬೇಕು. ಈಗ ಆಪಾದ್ಯವು ಇಷ್ಟವೇ ಆದರೆ ಆಪಾದ್ಯಸ್ಯ ಅನಿಷ್ಟತಾ ಎಂಬ ಅಂಗವು ಇಲ್ಲದಂತಾಗಿ ಅದು ತರ್ಕವೇ ಆಗುವುದಿಲ್ಲ.

**ಉದಾಹರಣೆಗೆ:–** ಒಬ್ಬನು ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಕ್ಕಾಗಿ ವಿಷವನ್ನು ಸೇವಿಸಲು ಉದ್ಯುಕ್ತನಾದಾಗ ಅವನನ್ನು ತಡೆದು "ನೀನು ವಿಷವನ್ನು ಕುಡಿದರೆ ಸಾಯುತ್ತೀಯೇ" ಎಂದು ತರ್ಕವನ್ನು ಮಾಡಿದರೆ ಇಲ್ಲಿ ಅವನಿಗೆ ಮರಣವು ಇಷ್ಟವೇ ಆಗಿರುವುದರಿಂದ 'ಆಪಾದ್ಯಸ್ಯ ಅನಿಷ್ಟತಾ' ಎಂಬ ಅಂಗವು ಇಲ್ಲ ಎಂದಾಗಿ ಅದು ತರ್ಕವೇ ಆಗುವುದಿಲ್ಲ. ಇದರಂತೆಯೇ ಪ್ರಕೃತದಲ್ಲೂ 'ಶಾಸ್ತ್ರಂ ಅನಾರಂಭಣೀಯಂ ಸ್ಯಾತ್' ಎಂದು ಹೇಳಿದರೆ ಆಗ ಮಾಯಾ–ವಾದಿಗಳು ಶಾಸ್ತ್ರ ಎಂಬ ಶಬ್ದದಿಂದ ಬೌದ್ಧಶಾಸ್ತ್ರ ಎಂದು ತಿಳಿದುಕೊಂಡು; ಬೌದ್ಧಶಾಸ್ತ್ರದಲ್ಲಿ ಅನಾರಂಭಣೀಯತ್ವವು ಇದೆ ಎಂದು ಮಾಯಾವಾದಿಯು ಅಂಗೀಕರಿಸುವುದರಿಂದ ಈ ತರ್ಕದಲ್ಲಿ ಆಪಾದ್ಯಸ್ಯ ಅನಿಷ್ಟತಾ ಇಲ್ಲವೆಂದಾಗುತ್ತದೆ. ಆದ್ದರಿಂದ ಈ ಆಪಾದ್ಯಸ್ಯ ಇಷ್ಟತ್ವ ಅನಿಷ್ಟತ್ವಾಭಾವ ಎಂಬ ದೋಷವನ್ನು ಪರಿಹಾರ ಮಾಡಲು ಶ್ರೀಮದಾಚಾರ್ಯರು ಶಾಸ್ತ್ರಂ' ಎಂದು ಹೇಳದೆ 'ವಿಮತಂ' ಎಂದು ಪ್ರಯೋಗಿಸಿದ್ದಾರೆ.

**ಟೀಕಾ:–** ತರ್ಹಿ ವೇದಾದಿ ಇತ್ಯೇವೋಚ್ಯತಾಮ್। ಮೈವಮ್। ವಿಮತಿಗ್ರಹಣೇನ ನಿರಾಶ್ರಯತ್ವಾದಿದೋಷಪರಿಹಾರಸ್ಯಾಪಿ ಸೂಚಿತತ್ವಾತ್। ಏವಂ ಆಪಾದ್ಯವೈಕಲ್ಯಾದಿ ದೋಷಪರಿಹಾರಸೂಚನಾಯ ಯಥಾ ಸಂಪ್ರತಿಪನ್ನಮಿತ್ಯುಕ್ತಮ್। ಅನ್ಯಥಾ ಯಥಾ ಬೌದ್ಧಾದಿಶಾಸ್ತ್ರಮಿತಿ ಬ್ರೂಯಾತ್।

**ಪ್ರತಿಪದಾರ್ಥ:-** ತರ್ಹಿ = ಆಪಾದ್ಯಸ್ಯ ಅನಿಷ್ಟತಾವನ್ನು ರಕ್ಷಿಸಬೇಕು ಎಂಬ ಅಭಿಪ್ರಾಯದಿಂದ 'ವಿಮತಂ' ಎಂದು ಶಬ್ದವನ್ನು ಹೇಳುವುದಾದರೆ, ವೇದಾದಿ = ವೇದಾದಿಗಳು (ಅನಾರಂಭಣೀಯಂ), ಇತ್ಯೇವ = ಇಂತೆಂದೇ, ಉಚ್ಯತಾಮ್ = ಹೇಳಲ್ಪಡಲಿ, ಏವಂ = ಈ ರೀತಿಯಾಗಿ, ಮಾ = ಹೇಳಬೇಡ, ವಿಮತಿಗ್ರಹಣೇನ = ಇಲ್ಲಿ "ವಿಮತಿ" ಶಬ್ದದಿಂದ, ನಿರಾಶ್ರಯತ್ವಾದಿ ದೋಷಪರಿಹಾರಸ್ಯಾಪಿ = ನಿರಾಶ್ರಯತ್ವಾದಿ ದೋಷ ಪರಿಹಾರಕ್ಕೂ ಕೂಡ, ಸೂಚಿತತ್ವಾತ್ = ಸೂಚನೆಯನ್ನು ಮಾಡಿದ್ದರಿಂದ, ಏವಂ = ಇದರಂತೆಯೇ (ದೃಷ್ಟಾಂತದಲ್ಲಿ), ಆಪಾದ್ಯವೈಕಲ್ಯಾದಿ–ದೋಷಪರಿಹಾರ ಸೂಚನಾಯ = ಆಪಾದ್ಯ = ಆಪತ್ತಿಗೆ ವಿಷಯವಾದಂತಹ ಧರ್ಮದ, ವೈಕಲ್ಯ = ಅಭಾವವೇ, ಆದಿ = ಮೊದಲಾಗಿ ಉಳ್ಳಂತಹ, ದೋಷಪರಿಹಾರ = ದೋಷದ ಪರಿಹಾರವನ್ನು, ಸೂಚನಾಯ = ತಿಳಿಸಿಕೊಡುವುದಕ್ಕೋಸ್ಕರ, ಯಥಾಸಂಪ್ರತಿಪನ್ನಂ = ಸಮ್ಮತವಾದ್ದರಂತೆ, ಇತಿ = ಇಂತೆಂದು, ಉಕ್ತಂ = ಹೇಳಲ್ಪಟ್ಟಿದೆ. ಅನ್ಯಥಾ = ಒಂದು ವೇಳೆ ಆಪಾದ್ಯವೈಕಲ್ಯವೆಂಬ ದೋಷದ ಪರಿಹಾರವನ್ನು ಸೂಚನೆ ಮಾಡದಿದ್ದರೆ. ಯಥಾ ಬೌದ್ಧಾದಿ–ಶಾಸ್ತ್ರಂ = ಬೌದ್ಧಾದಿ ಶಾಸ್ತ್ರದಂತೆ, ಇತಿ = ಇಂತೆಂದು, ಬ್ರೂಯಾತ್ = ಹೇಳುತ್ತಿದ್ದರು.

**ಭಾವಾರ್ಥ:-** ವೇದಾದಿಶಾಸ್ತ್ರವು ಅನಾರಂಭಣೀಯವಗಬೇಕಾದೀತು ಎಂದು ಹೇಳಬಹುದಿತ್ತು ಎಂಬ ಪ್ರಶ್ನೆ ಬರುವುದು. ಹಾಗೆ ಹೇಳಿದ್ದರೆ– ವಾದಿಯು ನಾಸ್ತಿಕ ಮತವನ್ನು ಅನುಸರಿಸಿ ವೇದಾದಿಶಾಸ್ತ್ರಗಳೇ ಇಲ್ಲ. ಆದ್ದರಿಂದ ಆಶ್ರಯಾಸಿದ್ಧಿ ಎಂಬ ದೋಷ ಬರುತ್ತದೆ ಅಲ್ಲದೇ ಬೌದ್ಧಾದಿಶಸ್ತ್ರವನ್ನು ದೃಷ್ಟಾಂತವನ್ನಾಗಿ ಕಂಠತಃ ಹೇಳಿದ್ದರೆ, ಆ ಬೌದ್ಧಶಸ್ತ್ರಕ್ಕೆ ಆರಂಭಣೀಯತ್ವವನ್ನು ಹೇಳುವ ಬೌದ್ಧಮತದ ಅನುಯಾಯಿಪ್ರಕಾರ ದೃಷ್ಟಾಂತದಲ್ಲಿ ಆಪಾದ್ಯ- ವೈಕಲ್ಯ ಎಂಬ ದೋಷ ಬರುತ್ತದೆ ಎಂದು ಈ ಮೊದಲಾಗಿ ಹೇಳಬಹುದು. ಅದನ್ನು ಪರಿಹರಿಸಲು ಈ ರೀತಿ "ವಿಮತಂ" ಎಂದು ಸಾಮಾನ್ಯವಾಗಿ ಹೇಳಿದ್ದು ಇರುತ್ತದೆ. ಹಾಗೆ ಅಭಿಪ್ರಾಯ ಇರದಿದ್ದರೆ ಬೌದ್ಧಾದಿಶಾಸ್ತ್ರದಂತೆ ಎಂದು ದೃಷ್ಟಾಂತವನ್ನು ಉದಹರಿಸಬಹುದಿತ್ತು.

**ಅವತಾರಿಕಾ:–** ಶ್ರೀಮದಾಚಾರ್ಯರು ಇಲ್ಲಿ ಅನಾರಂಭಣೀಯತ್ವವನ್ನು ವಿಮತ ಶಾಸ್ತ್ರಕ್ಕೆ ಆಪತ್ತಿ ಮಾಡಿದ್ದಾರೆ. ಈ ಅನಾರಂಭಣೀಯತ್ವ ಶಬ್ದದ ಅರ್ಥವನ್ನು ವಿಕಲ್ಪಿಸುತ್ತಿದ್ದಾರೆ "ನನು" ಎಂಬ ಮುಂದಿನ ಗ್ರಂಥದಿದ:—

**ಟೀಕಾ:-** ನನ್ವನಾರಂಭಣೀಯತ್ವಂ ನಾಮ ಅಪ್ರಣೇತವ್ಯತ್ವಂ ವಾ ಅಶ್ರೋತವ್ಯತ್ವಾದಿಕಂ ವಾ। ಆದ್ಯೇತ್ವಿಷ್ಟಾ- ಪಾದನಮ್। ವೇದಸ್ಯಾಪ್ರಣೇತವ್ಯತಾತ್। ನ ದ್ವಿತೀಯಃ। ಬೌದ್ಧಾದಿಶಾಸ್ತ್ರ ಶ್ರವಣಸ್ಯಾಪಿ ದರ್ಶನಾತ್। ಮೈವಮ್। ಪ್ರೇಕ್ಷಾವದನುಪಾದೇಯತ್ವಸ್ಯ ವಿವಕ್ಷಿತತ್ವಾತ್।

**ಪ್ರತಿಪದಾರ್ಥ:–** ನನು = ಪ್ರಶ್ನೆ, ಅನಾರಂಭಣೀಯತ್ವಂ ನಾಮ = ಅನಾರಂಭಣೀಯತ್ವ ಎಂದರೆ, ಅಪ್ರಣೇತ- ವ್ಯತ್ವಂ ವಾ=ಕೃತಿಗೆ ವಿಷಯವಲ್ಲ ಎಂದು ಅರ್ಥವೋ, ವಾ=ಅಥವ, ಅಶ್ರೋತವ್ಯತ್ವಾದಿಕಂ=ಶ್ರವಣೇಂದ್ರಿಯ- ಜನ್ಯ ಜ್ಞಾನಕ್ಕೆ ವಿಷಯವಲ್ಲ ಎಂದು ಅರ್ಥವೋ, (ಇಲ್ಲಿ ಅದಿಕಂ ವ ಎಂಬಲ್ಲಿರುವ ಆದಿ ಪದದಿಂದ ಮನನಕ್ಕೆ ವಿಷಯವಲ್ಲ ಎಂದು ಅರ್ಥವೋ), ಆದ್ಯೇತು = ಮೊದಲನೆ ಪಕ್ಷವನ್ನು (ಅಪ್ರಣೇತವ್ಯತ್ವವನ್ನು) ಅಂಗೀಕರಿಸಿದರೆ ಇಷ್ಟಾಪಾದನಂ=(ಮಾಯಾವಾದಿಗೆ) ಇಷ್ಟವಾದದ್ದನ್ನೇ ಆಪತ್ತಿಮಾಡಿದಂತಾಯಿತು. (ಏಕೆಂದರೆ) ವೇದಸ್ಯ=ವೇದಕ್ಕೆ ಅಪ್ರಣೇತವ್ಯತ್ವಾತ್=ಕ್ರಿಯಾವಿಷಯತ್ವವು ಅಂದರೆ ರಚನಾವಿಷಯತ್ವ ಇಲ್ಲವಾದ್ದರಿಂದ। ನ ದ್ವಿತೀಯಃ=ಎರಡನೆಯ ಪಕ್ಷವು (ಶ್ರವಣೇಂದ್ರಿಯ ಜನ್ಯಜ್ಞಾನಾ ವಿಷಯತ್ವವು) ಸರಿಯಲ್ಲ, (ಏಕೆಂದರೆ) ಬೌದ್ಧಾದಿಶಾಸ್ತ್ರ ಶ್ರವಣಸ್ಯಾಪಿ= ಬೌದ್ಧಾದಿ ಶಾಸ್ತ್ರಗಳ ಶ್ರವಣವು ಅಂದರೆ ಶ್ರವಣೇಂದ್ರಿಯ ಜನ್ಯಜ್ಞಾನಕ್ಕೆ ಬೌದ್ಧಾದಿಶಾಸ್ತ್ರಗಳು ವಿಷಯವಾಗುವುದು ದರ್ಶನಾತ್=ಕಂಡಿದ್ದರಿಂದ. ಏವಂ=ಈ ರೀತಿಯಾಗಿ. ಮಾ=ಹೇಳಬೇಡ, ಪ್ರೇಕ್ಷಾವದನುಪಾದೇಯತ್ವಸ್ಯ= ಪ್ರೇಕ್ಷಾವತಾ=ಸಮೀಚೀನಜ್ಞಾನಿಯಿಂದ, ಅನುಪಾದೇಯತ್ವಸ್ಯ=ಸ್ವೀಕಾರಾ ವಿಷಯತ್ವಕ್ಕೆ, ವಿವಕ್ಷಿತತ್ವಾತ್= ಹೇಳಲು ವಿಷಯತ್ವವು ಇರುವುದರಿಂದ.

**ಭಾವಾರ್ಥ:–** ಶ್ರೀಮದಾಚಾರ್ಯರು ಇಲ್ಲಿ ಅನಾರಂಭಣೀಯತ್ವವನ್ನು ವಿಮತ ಶಾಸ್ತ್ರಕ್ಕೆ ಆಪತ್ತಿ ಮಾಡಿದ್ದಾರೆ, ಈ ಅನಾರಂಭಣೀಯತ್ವ ಶಬ್ದದ ಅರ್ಥವನ್ನು ವಿಕಲ್ಪಿಸುತ್ತಿದ್ದಾರೆ. ಹೇಗೆಂದರೆ ಅಪ್ರಣೇಯತ್ವಂ ಎಂದರೆ ರಚಿಸಲು ಯೋಗ್ಯವು ಆಗದಿರುವಿಕೆ ಅಂದರೆ ರಚನೆಗೆ ವಿಷಯವು ಆಗದೆ ಇರಲಿ ಎಂದು ಆಯಿತು. ಇಲ್ಲಿ ಆಪಾದ್ಯವು ಕೃತಿ- ವಿಷಯತ್ವಾಭಾವವಾಗಿದೆ. ಅಂದರೆ ವೇದವು ಅಪೌರುಷೇಯವು ಎಂದು ಹೇಳಿದಂತಾಯಿತು. ಇದು ವೇದಾ ಪೌರುಷೇಯತ್ವವಾದಿಯಾದ ಮಾಯಾವಾದಿಗೆ ಇಷ್ಟವೇ ಆಗಿರುವುದರಿಂದ ಆಪಾದ್ಯಸ್ಯ ಅನಿಷ್ಟತಾ ಇಲ್ಲವೆಂದಾಗುತ್ತದೆ.

ಇನ್ನು ಎರಡನೆಪಯ ವಿಷಯವನ್ನು ಸ್ವೀಕರಿಸಿದರೆ ಅನಾರಂಭಣೀಯತ್ವಂ ಎಂದರೆ ಶ್ರವಣೇಂದ್ರಿಯ ಜನ್ಯ ಜ್ಞಾನಾವಿಷಯತ್ವಂ ಅಥವಾ ಮನನಾವಿಷಯತ್ವಂ ಅಂದರೆ ಶ್ರವಣೇಂದ್ರಿಯದಿಂದ ಹುಟ್ಟಿದ ಜ್ಞಾನಕ್ಕೆ ವಿಷಯವಲ್ಲ ಮತ್ತು ಮನನಕ್ಕೆ ವಿಷಯವಲ್ಲ ಎಂದು ಅನಾರಂಭಣೀಯತ್ವ ಶಬ್ದಾರ್ಥವನ್ನು ಹೇಳಿದರೆ ಆಗ ಬೌದ್ಧಾದಿ ಶಾಸ್ತ್ರದಲ್ಲಿ ವ್ಯಭಿಚಾರವು ಬರುತ್ತದೆ. ಏಕೆಂದರೆ ಬೌದ್ಧಾದಿ ಶಾಸ್ತ್ರವು ಅನ್ಯಥಾ ಪ್ರತಿಪಾದಕವಾಗಿದ್ದು ಅಲ್ಲಿ ಅನ್ಯಥಾ- ಪ್ರತಿಪಾದಕತ್ವ ಎಂಬ ಆಪಾದಕವಿದೆ, ಬೌದ್ಧಾದಿ ಶಾಸ್ತ್ರವು ಶ್ರವಣ ಮನನಗಳಿಗೆ ವಿಷಯವಾಗಿರುವುದು ಕಂಡಿದೆ.

ಹೀಗೆ ದೃಷ್ಟಾಂತದಲ್ಲಿ ಆಪಾದ್ಯವೈಕಲ್ಯವು ಬರುವುದರಿಂದ ಅನಾರಂಭಣೀಯತ್ವಂ ಎಂದರೆ ಪ್ರಮಾಣ ಮನನಾವಿಷಯತ್ವಂ ಎಂಬ ಅರ್ಥವನ್ನು ಹೇಳಲು ಬರುವುದಿಲ್ಲ ಎಂದು ಶಂಕಿಸಿದಾಗ ಇದಕ್ಕೆ ಉತ್ತರವೇನೆಂದರೆ ಮಾಯಾವಾದಿಯು ಹೇಳಿದಂತೆ ಅನಾರಂಭಣೀಯತ್ವ ಶಬ್ದಕ್ಕೆ ಎರಡು ಅರ್ಥವನ್ನು ಹೇಳುವುದಿಲ್ಲ. ಆದರೆ "ಪ್ರೇಕ್ಷಾವತ್ಕರ್ತೃಕ ಸ್ವೀಕಾರಾಯತ್ವ ಅಂದರೆ ಸಮೀಚೀನ ಜ್ಞಾನಿಗಳಿಂದ ಮಾಡಲ್ಪಟ್ಟ ಸ್ವೀಕಾರಕ್ಕೆ ಯೋಗ್ಯವಲ್ಲ ಎಂದು ಅರ್ಥವನ್ನು ಹೇಳುತ್ತೇವೆ. ಹೀಗೆ ನಾವು ವೇದಾದಿ ಶಾಸ್ತ್ರಾಂತರ್ಭಾವೇಣ ಇಷ್ಟಾಪಾದನವಾಗಲಿ ಅಥವಾ ಬೌದ್ಧಾದಿ ಶಾಸ್ತ್ರಾಂತರ್ಭಾವೇಣ ಆಪಾದ್ಯವೈಕಲ್ಯಾದಿ ದೋಷವು ಬರುವುದಿಲ್ಲ. ಏಕೆಂದರೆ ವೇದಾದಿ ಶಾಸ್ತ್ರಕ್ಕೆ ಪ್ರೇಕ್ಷಾವತ್ಕರ್ತೃಕ-ಸ್ವೀಕಾರ ವಿಷಯತ್ವವನ್ನೇ ಮಾಯಾ-ವಾದಿಯು ಅಂಗೀಕರಿಸಿದ್ದರಿಂದ ಸ್ವೀಕಾರಾವಿಷಯತ್ವವು ಅವನಿಗೆ ಅನಿಷ್ಟವಾಗುತ್ತದೆ. ಆಪಾದ್ಯವು ಅವನಿಗೆ ಅನಿಷ್ಟ-ವಾಗುತ್ತದೆ. ಅವನಿಷ್ಟವಾದ್ದರಿಂದ 'ಆಪಾದ್ಯಸ್ಯ ಅನಿಷ್ಟತಾ' ಎಂಬ ತರ್ಕದ ಅಂಗವು ಬಂದಿತು.

ಇನ್ನು ಬೌದ್ಧಾದಿ ಶಾಸ್ತ್ರಗಳು ಪ್ರೇಕ್ಷಾವಂತರಿಂದ ಮಾಡಲ್ಪಟ್ಟ ಸ್ವೀಕಾರಕ್ಕೆ ಯೋಗ್ಯವಾಗಿಲ್ಲವಾದ್ದರಿಂದ ಅಂದರೆ ಜ್ಞಾನಿಗಳು ಬೌದ್ಧಾದಿ ಶಾಸ್ತ್ರಗಳನ್ನು ಸ್ವೀಕಾರಮಾಡುವದಿಲ್ಲದಾದ್ದರಿಂದ. ಪ್ರೇಕ್ಷಾವತ್ಕರ್ತೃಕ ಸ್ವೀಕಾರಾವಿಷಯತ್ವ ಎಂಬ ಆಪಾದ್ಯವು ಬೌದ್ಧಾದಿ ಶಾಸ್ತ್ರದಲ್ಲಿರುವುದರಿಂದ ದೃಷ್ಟಾಂತದಲ್ಲಿ ಆಪಾದ್ಯವೈಕಲ್ಯ ದೋಷವಿಲ್ಲ.

**ಅವತಾರಿಕಾ:—** ಶ್ರೀಮದ್ವಾಚಾರ್ಯರು 'ವಿಮತಃ ಅನಾರಂಭಣೀಯಂ ಅನ್ಯಥಾಪ್ರತಿಪಾದಕತ್ವಾತ್' ಎಂದು ಸಾಧನಾನು-ಮಾನವನ್ನು ತಿಳಿಸುವ ವಾಕ್ಯ ಪ್ರಯೋಗಮಾಡಿದಾಗ, ವೇದತನ್ಮೀಮಾಂಸ ಶಾಸ್ತ್ರಗಳಿಗೆ ಅನಾರಂಭಣೀಯತ್ವವನ್ನು ಸಾಧನೆಯನ್ನು ಮಾಡಿದಂತಾಯಿತು, ಆಗ ಆಚಾರ್ಯರಿಗೆ ಅಪಸಿದ್ಧಾಂತವು ಬರುತ್ತದೆ (ಅಪಸಿದ್ಧಾಂತವೆಂದರೆ ತಮಗಿಂತಲೂ ಪೂರ್ವಜರಾದಾಂತಹ ಆಚಾರ್ಯರಿಂದ ಅಂಗೀಕರಿಸಲ್ಪಟ್ಟ ಅರ್ಥಕ್ಕೆ ವಿರುದ್ಧವಾದಂತಹ ಅರ್ಥವನ್ನು ಅಂಗೀಕರಿಸುವುದು) ಮತ್ತು ಈ ಅನುಮಾನಕ್ಕೆ ಪ್ರಮಾಣಬಾಧ ಬರುತ್ತದೆ. (ಪ್ರಮಾಣಬಾಧ ಎಂದರೆ ಯಾವ ಧರ್ಮವು ಇರುವುದಿಲ್ಲ ಎಂದು ಬೇರೆ ಪ್ರಮಾಣದಿಂದ ನಿಶ್ಚಿತವಾಗಿರುವುದೋ ಅಂತಹ ಧರ್ಮವನ್ನೇ ಸಾಧಿಸುವುದು) ಎಂದು ಪ್ರಶ್ನಿಸಿದರೆ ಇದಕ್ಕೆ ಉತ್ತರವನ್ನು ಶ್ರೀಪ [illegible] ಕೃತ್ಪಾದರೂ ಹೇಳುತ್ತಿದ್ದಾರೆ:—

**ಟೀಕಾ:—** ಸ್ಯಾದಿತಿ ಪ್ರತಿಜ್ಞಾವಾಕ್ಯಶೇಷಃ।

**ಪ್ರತಿಪದಾರ್ಥ:—** ಸ್ಯಾತ್ ಇತಿ=ಸ್ಯಾತ್ ಎಂಬ ಪದವು, ಪ್ರತಿಜ್ಞಾವಾಕ್ಯಶೇಷಃ=ಪ್ರತಿಜ್ಞಾವಾಕ್ಯ="ವಿಮತಂ ಅನಾರಂಭಣೀಯಂ" ಎಂಬ ಪ್ರತಿಜ್ಞಾವಾಕ್ಯದಲ್ಲಿ ಶೇಷಃ=ಅರ್ಥಪೂರ್ವಕವಾಗಿ ಸೇರಿಸಲ್ಪಡುತ್ತದೆ.

**ಭಾವಾರ್ಥ:—** ಶ್ರೀಮದ್ವಾಚಾರ್ಯರ ಪ್ರತಿಜ್ಞಾವಾಕ್ಯದಲ್ಲಿ 'ಸ್ಯಾತ್' ಎಂಬ ಶಬ್ದವನ್ನು ಸೇರಿಸಿಕೊಂಡು ಈ ವಾಕ್ಯದಿಂದ ತರ್ಕವನ್ನು ತಿಳಿಯಬೇಕು. ಹೀಗೆ ತರ್ಕವನ್ನು ಮಾಡಿದಾಗ ಈ ವಾಕ್ಯವು ವೇದಾದಿ ಶಾಸ್ತ್ರದಲ್ಲಿ ಅನಾರಂಭಣೀಯತ್ವ-ವನ್ನು ಸಾಧಿಸುವ ಅನುಮಾನವನ್ನು ಪ್ರದಿಪಾದಿಸುವುದಿಲವಾದ್ದರಿಂದ ಆಚಾರ್ಯರಿಗೆ ಅಪಸಿದ್ಧಾಂತವಾಗಲಿ, ಈ ಅನುಮಾನಕ್ಕೆ ಪ್ರಮಾಣಬಾಧವಾಗಲಿ ಬರುವುದಿಲ್ಲ.

**ಅವತಾರಿಕಾ:—** ಹೀಗೆ ಸ್ಯಾತ್ ಎಂಬ ಶಬ್ದವನ್ನು ಸೇರಿಸುವುದರಿಂದ ಏನು ಹೇಳಿದಂತಾಯಿತು ಎಂದರೆ ಶ್ರೀಮದಾ-ಚಾರ್ಯರ ಅಭಿಪ್ರಾಯವನ್ನು ಹೇಳುತ್ತಿದ್ದಾರೆ 'ತಥಾಚ' ಎಂಬ ಮುಂದಿನ ಗ್ರಂಥದಿಂದ—

**ಟೀಕಾ:—** ತಥಾಚ [illegible] ವೇದಾದಿಕಂ [illegible] ಸ್ಯಾತ್ [illegible] ಅನಾರಂಭಣೀಯಂ ಪ್ರಸಜ್ಯೇತ। ಇತ್ಯುಕ್ತಂ ಭವತಿ।

**ಪ್ರತಿಪದಾರ್ಥ:-** ತಥಾ ಚ=ಹೀಗೆ ಸ್ಯಾತ್ ಎಂಬ ಶಬ್ದವನ್ನು ಪ್ರತಿಜ್ಞಾ ವಾಕ್ಯದಲ್ಲಿ ಸೇರಿಸುವುದರಿಂದ. ಯದಿ= ಒಂದು ವೇಳೆ, ವೇದಾದಿಕಂ=ವೇದಾದಿ ಶಾಸ್ತ್ರವು, ಜೀವಬ್ರಹ್ಮಣೋಃ=ಜೀವ ಮತ್ತು ಪರಮಾತ್ಮನಿಗೆ, ಐಕ್ಯ-ಪ್ರತಿಪಾದಕಂ=ಅಭೇದವನ್ನು ಹೇಳುವಂಥಾದ್ದು, ಸ್ಯಾತ್=ಆದರೆ, ತದಾ=ಆಗ, ಅನಾರಂಭಣೀಯತಂ ಪ್ರಸಜ್ಯೇತ= ಪ್ರೇಕ್ಷಾವಂತರಿಂದ ಮಾಡಲ್ಪಟ್ಟ ಸ್ವೀಕಾರಕ್ಕೆ ಅವಿಷಯವಾಗುವ ಪ್ರಸಂಗ ಬರುತ್ತದೆ, ಇತಿ=ಈ ರೀತಿಯಾಗಿ, ಉಕ್ತಂ ಭವತಿ=ಹೇಳಲ್ಪಟ್ಟಂತಾಯಿತು.

**ಭಾವಾರ್ಥ:—** ಈ ರೀತಿಯಾಗಿ ಪ್ರತಿಜ್ಞಾವಾಕ್ಯದಲ್ಲಿ ಸ್ಯಾತ್ ಎಂಬ ಪದವನ್ನು ಅಧ್ಯಾಹಾರ ಮಾಡುವುದರಿಂದ "ಯದಿ ವಿಮತಶಾಸ್ತ್ರಂ ಐಕ್ಯಪ್ರತಿಪಾದಕಂ ಸ್ಯಾತ್ ತರ್ಹಿ ಅನಾರಂಭಣೀಯಂ ಸ್ಯಾತ್" ಎಂದು ತರ್ಕವನ್ನು ಹೇಳಿದಂತಾಯಿತು.

ಹೀಗೆ ಆಚಾರ್ಯರ ಗ್ರಂಥದಿಂದ ಹೇಳಲ್ಪಡದೆ ಇದ್ದಂತಹ ಐಕ್ಯಪ್ರತಿಪಾದಕತ್ವ ಎಂಬ ಆಪಾದಕವನ್ನು ಅನಾರಂಭಣೀಯತ್ವವನ್ನು ಆಪತ್ತಿ ಮಾಡುವುದಕ್ಕೋಸ್ಕರಹೇಳುವುದಾದರೆ, ಆಚಾರ್ಯರು ಪ್ರಯೋಗಿಸಿದ 'ಅನ್ಯಥಾ ಪ್ರತಿಪಾದಕತ್ವಾತ್' ಎಂಬ ಹೇತುವಾಕ್ಯವು ವ್ಯರ್ಥವಾಗುತ್ತದೆ ಎಂದು ಹೇಳಿದರೆ ಅದಕ್ಕೆ ಉತ್ತರವನ್ನು ಹೇಳುತ್ತಿದ್ದಾರೆ 'ಆಪಾದಕಮೇವ' ಎಂಬ ಗ್ರಂಥದಿಂದ—

**ಟೀಕಾ:—** ಆಪಾದಕಮೇವ ಅನ್ಯಥಾಪ್ರತಿಪಾದಕತ್ವಾದಿತ್ಯನೇನ ಹೇತುವಾಕ್ಯೇನ ವಿವ್ರಿಯತೇ ಇತ್ಯದೋಷಃ।
**ಪ್ರತಿಪದಾರ್ಥ:—** ಆಪಾದಕಮೇವ=ಆಪಾದಕವಾದ ಐಕ್ಯಪ್ರತಿಪಾದಕತ್ವವೇ। ಅನ್ಯಥಾಪ್ರತಿಪದಕತ್ವಾತ್ ಇತ್ಯನೇನ ಹೇತುವಾಕ್ಯೇನ=ಅನ್ಯಥಾಪ್ರತಿಪಾದಕತ್ವಾತ್ ಎಂಬ ವಾಕ್ಯದಿಂದ, ವಿವ್ರಿಯತೇ=ವಿವರಿಸಲ್ಪಡುತ್ತದೆ, ಆದರಿಂದ, ಇತಿ=ಈ ರೀತಿಯಾಗಿ, ಅದೋಷ=ವೈಯರ್ಥ (ನಿರರ್ಥಕ) ಎಂಬ ದೋಷವಿಲ್ಲ.

**ಭಾವಾರ್ಥ:—** ಐಕ್ಯಪ್ರತಿಪಾದಕತ್ವವು ವ್ಯಾಪ್ಯವಾಗಿದೆ. ಅನ್ಯಥಾ ಪ್ರತಿಪಾದಕತ್ವವು ವ್ಯಾಪಕವಾಗಿದೆ. ಆದ್ದರಿಂದ ಐಕ್ಯಪ್ರಪಾದಕತ್ವವು ಇದ್ದಲ್ಲಿ ಅನ್ಯಥಾ ಪ್ರತಿಪಾದಕತ್ವವು ನಿಶ್ಚಿತವಾಗಿ ಇರುತ್ತದೆ. ಹೀಗೆ ಐಕ್ಯಪ್ರತಿಪಾದಕತ್ವವನ್ನು ಶಾಸ್ತ್ರಕ್ಕೆ ಹೇಳಿದರೆ ಆ ಐಕ್ಯಪ್ರತಿಪಾದಕತ್ವದಿಂದ ಅನ್ಯಥಾ ಪ್ರತಿಪಾದಕತ್ವವನ್ನು ವೇದಾದಿ ಶಾಸ್ತ್ರಕ್ಕೆ ಆಪಾದಿಸಿ,. ಆ ಅನ್ಯಥಾ ಪ್ರತಿಪಾದಕತ್ವದಿಂದ ಅನಾರಂಭಣೀಯತ್ವವನ್ನು ಆಪಾದಿಸುತ್ತಾರೆ. ಆದ್ದರಿಂದ ಅನಾರಂಭಣೀಯತ್ವ ಎಂಬ ಮುಖ್ಯ ಆಪಾದ್ಯಕ್ಕೆ ಅನ್ಯಥಾ ಪ್ರತಿಪಾದಕತ್ವವು ಸಾಕ್ಷಾತ್ ಆಪಾದಕವು. ಅನ್ಯಥಾ ಪ್ರತಿಪಾದಕತ್ವ ಎಂಬ ಅಪಾಯಿ ಆಪಾದ್ಯಕ್ಕೆ ಐಕ್ಯ ಪ್ರತಿಪಾದಕತ್ವವು ಆಪಾದಕವು ಹೀಗೆ ಜೀವಬ್ರಹ್ಮೈಕ್ಯ ಪ್ರತಿಪಾದಕತ್ವವು ಪರಂಪರಯಾ ಆಪಾದಕವಾಗಿದೆ. ಅನ್ಯಥಾ ಪ್ರತಿಪಾದಕತ್ವವು ಅನಾರಂಭಣೀಯತ್ವಕ್ಕೆ ಸಾಕ್ಷಾತ್ ಆಪಾದಕವಾಗಿದೆ ಎಂದು. ಆದ್ದರಿಂದ ಶ್ರೀಮದಾಚಾರ್ಯರ ಗ್ರಂಥಕ್ಕೆ ವೈಯರ್ಥ್ಯ ಎಂಬ ದೋಷವಿಲ್ಲ.

**ಅವತಾರಿಕಾ:—** ಹೀಗೆ ಈ ಐಕ್ಯಪ್ರತಿಪಾದಕತ್ವವು ಅನ್ಯಥಾ ಪ್ರತಿಪಾದಕತ್ವಕ್ಕೆ ಆಪಾದಕವು ಹೇಗೆ ಆಗುತ್ತದೆ? ಅಂದರೆ ಐಕ್ಯಪ್ರತಿಪಾದಕತ್ವ ಇದ್ದರೆ ಅನ್ಯಥಾ ಪ್ರತಿಪಾದಕತ್ವ ಹೇಗೆ ಇದೆ ಎಂದು ಪ್ರಶ್ನೆ ಬಂದರೆ ಉತ್ತರ ಹೇಳುತ್ತಾರೆ:—

**ಟೀಕಾ:-** ತಚ್ಚ ಉತ್ತರತ್ರ ಪ್ರದರ್ಶಯಿಷ್ಯಾಮಃ—

ತಚ್ಚ=ಐಕ್ಯಪ್ರತಿಪಾದಕತ್ವವು ಅನ್ಯಥಾ ಪ್ರತಿಪಾದಕತ್ವಕ್ಕೆ ವ್ಯಾಪ್ಯವಾಗಿದೆ ಎಂಬ ವಿಷಯವನ್ನೆ. ಉತ್ತರತ್ರ= =ಮುಂದಿನ ವಾಕ್ಯದ ವ್ಯಾಖ್ಯಾನ ಕಾಲದಲ್ಲೇ, ಪ್ರದರ್ಶಯಿಷ್ಯಾಮಃ=ತೋರಿಸಿಕೊಡುತ್ತೇವೆ.

**ಭಾವಾರ್ಥ:-** ಐಕ್ಯಪ್ರತಿಪಾದಕತ್ವವೇ ಅನ್ಯಥಾ ಪ್ರತಿಪಾದಕತ್ವವು ಎಂಬ ವಿಷಯವನ್ನು ಮುಂದಿನ ವಾಕ್ಯದ ವ್ಯಾಖ್ಯಾನ ಸಮಯದಲ್ಲಿ ತೋರಿಸಿಕೊಡುತ್ತೇವೆ.

**ಅವತಾರಿಕಾ:—** ಈ ರೀತಿಯಾಗಿ ವಿಮತಂ ಅನಾರಂಭಣೀಯಂ ಅನ್ಯಥಾ ಪ್ರತಿಪಾದಕತ್ವಾತ್ ಎಂಬ ವಾಕ್ಯವನ್ನು ದೂಷಣಾನುಮಾನ ಪರತಯಾ ವ್ಯಾಖ್ಯಾನವನ್ನು ಮಾಡಿ ಈಗ ಸಾಧನಾನುಮಾನಪರತಯಾ ವ್ಯಾಖ್ಯಾನ ಮಾಡು-ತ್ತಿದ್ದಾರೆ 'ಅಥವಾ' ಎಂಬ ಗ್ರಂಥದಿಂದ:—

**ಟೀಕಾ:-** ಅಥವಾ ವೇದಬ್ರಹ್ಮಮೀಮಾಂಸಾದಿಕಂ ಐಕ್ಯಪರತಯಾ ವ್ಯಾಕುರ್ವನ್ಮಾಯಾವಾದಿ ಪ್ರಣೀತಂ ಶಾಸ್ತ್ರಮೇವ ಪಕ್ಷೀಕೃತ್ಯ ತಸ್ಯ ಅನಾರಂಭಣೀಯತ್ವಂ ವೇದಾದೇಸ್ತತ್ಪರತ್ವನಿರಾಸಾಯ ಸಾಧ್ಯತೇ।

**ಪ್ರತಿಪದಾರ್ಥ:-** ಅಥವಾ = ಇನ್ನೊಂದು ರೀತಿ ಏನೆಂದರೆ. ವೇದ ಬ್ರಹ್ಮ ಮೀಮಾಂಸಾದಿಕಂ = ವೇದವು ಆ ವೇದಕ್ಕೆ ನಿರ್ಣಾಯಕವಾದಂತಹ ಬ್ರಹ್ಮಸೂತ್ರಗಳು ಇವೇ ಮೊದಲಾಗಿವುಳ್ಳ ಶಾಸ್ತ್ರಗಳನ್ನು, ಐಕ್ಯಪರತಯಾ = ಐಕ್ಯವಿಷಯಕ-ವನ್ನಾಗಿ, ವ್ಯಾಕುರ್ವನ್ = ವ್ಯಾಖ್ಯಾನ ಮಾಡುವಂತಹ, ಮಾಯಾವಾದಿ ಪ್ರಣೀತಂ = ಮಾಯಾವಾದಿಯಿಂದ ಮಾಡಲ್ಪಟ್ಟಂತಹ, ಶಾಸ್ತ್ರಮೇವ=ಗ್ರಂಥವನ್ನೇ, ಪಕ್ಷೀಕೃತ್ಯ ಪಕ್ಷವನ್ನಾಗಿ ಮಾಡಿ, ವೇದಾದೇಃ=ವೇದಾದಿ ಶಾಸ್ತ್ರಕ್ಕೆ, ತತ್ಪರತ್ವನಿರಾಸಾಯ=ಐಕ್ಯ ವಿಷಯಕತ್ವವನ್ನು ಖಂಡನ ಮಾಡುವುದಕ್ಕೋಸ್ಕರ, ತಸ್ಯ=ಆ ಮಾಯಾವಾದಿ ಶಾಸ್ತ್ರಕ್ಕೆ, ಅನಾರಂಭಣೀಯತ್ವಂ=ಅನಾರಂಭಣೀಯತ್ವವು, ಸಾಧ್ಯತೇ=ಸಾಧಿಸಲ್ಪಡುತ್ತದೆ.

**ಭಾವಾರ್ಥ:-** ವೇದಾದಿ ಶಾಸ್ತ್ರಗಳು ಐಕ್ಯವನ್ನು ಹೇಳುತ್ತವೆ ಎಂದು ಮಾಯಾವಾದಿಯು ತನ್ನ ಗ್ರಂಥದಲ್ಲಿ ವ್ಯಾಖ್ಯಾನ ವನ್ನು ಮಾಡಿದ್ದಾನೆ. ಆದ್ದರಿಂದ ಮಾಯಾವಾದಿಯ ಗ್ರಂಥವನ್ನು ಓದುವವರಿಗೆ ವೇದಾದಿ ಶಾಸ್ತ್ರಗಳು ಐಕ್ಯವನ್ನು ಹೇಳುತ್ತವೆ ಎಂಬ ಜ್ಞಾನವು ಹುಟ್ಟುತ್ತದೆ. ಇದು ಅನ್ಯಥಾಜ್ಞಾನವಾಗಿದೆ. ಈ ಅನ್ಯಥಾ ಜ್ಞಾನವು ಹೋಗಬೇಕಾದರೆ ಮಾಯಾವಾದಿಯ ಶಾಸ್ತ್ರವನ್ನು ಅನಾರಂಭಣೀಯ ಎಂದು ಸಮರ್ಥಿಸಬೇಕು. ಆದ್ದರಿಂದ ಶ್ರೀಪಾದಾಚಾರ್ಯರು ಅದ್ವೈತಶಾಸ್ತ್ರಕ್ಕೆ ಅನಾರಂಭಣೀಯತ್ವವನ್ನು ಸಮರ್ಥಿಸುತ್ತಿದ್ದಾರೆ.

ಹೀಗೆ ಮೇಲೆ ಹೇಳಿದಂತೆ "ವಿಮತಂ (ಮಾಯಾವಾದಿ ಶಾಸ್ತ್ರಂ) ಅನಾರಂಭಣೀಯಂ ಅನ್ಯಥಾಪ್ರತಿಪಾದಕತ್ವಾತ್" ಎಂದು ಸಮರ್ಥಿಸಿ ಸಾಧನಾನುಮಾನವನ್ನು ಆಚಾರ್ಯರು ಮಾಡಿದಂತಾಯಿತು. ಈ ಅನುಮಾನಕ್ಕೆ ಮಾಯಾವಾದಿ ಶಾಸ್ತ್ರ ಎಂಬ ಪಕ್ಷದಲ್ಲಿ ಅನ್ಯಥಾ ಪ್ರತಿಪಾದಕತ್ವ ಎಂಬ ಹೇತು ಇಲ್ಲವಾದ್ದರಿಂದ ಅಸಿದ್ಧಿ ದೋಷವನ್ನು ಶಂಕಿಸುತ್ತಾನೆ ಮುಂದಿನ ಗ್ರಂಥದಿಂದ:—

**ಟೀಕಾ:-** ಕಥಮನ್ಯಥಾಪ್ರತಿಪಾದಕತ್ವಂ ವಿಮತಸ್ಯ ಶಾಸ್ತ್ರಸ್ಯ ಇತಿ। ಅತ ಆಹ—

**ಪ್ರತಿಪದಾರ್ಥ:—** ವಿಮತಸ್ಯ = ಸಂಶಯ ವಿಷಯವಾದಂತಹ, ಶಾಸ್ತ್ರಸ್ಯ = ಶಾಸ್ತ್ರಕ್ಕೆ, ಅನ್ಯಥಾಪ್ರತಿಪಾದಕತ್ವಂ = ವಿಪರೀತ ಜ್ಞಾನಜನಕತ್ವವು, ಕಥಂ = ಹೇಗೆ?, ಇತಿ = ಈ ರೀತಿಯಾಗಿ (ಅಸಿದ್ಧಿಯು), ಅತಃ = ಶಂಕಾಮಾಡಿದ್ದರಿಂದ, (ಈ ಅಸಿದ್ಧಿ ಪರಿಹಾರಕ್ಕಾಗಿ), ಆಹ = ಉತ್ತರವನ್ನು ಹೇಳುತ್ತಿದ್ದಾರೆ.

**ಭಾವಾರ್ಥ:-** ಮಾಯಾವಾದಿ ಶಾಸ್ತ್ರಕ್ಕೆ ಅನ್ಯಥಾ ಜ್ಞಾನ ಜನಕತ್ವವು ಇಲ್ಲ. ಆದ್ದರಿಂದ ಪಕ್ಷದಲ್ಲಿ ಅನ್ಯಥಾ ಪ್ರತಿ-ಪಾದಕತ್ವ ಎಂಬ ಹೇತುವಿಲ್ಲವಾದ್ದರಿಂದ ಈ ಹೇತುವಿಗೆ ಸ್ವರೂಪಾಸಿದ್ಧಿ ಎಂಬ ದೋಷವು ಬರುತ್ತದೆ. ಹೀಗೆ ಮಾಯಾವಾದಿಯು ಹೇಳಿದರೆ ಆ ಅಸಿದ್ಧಿ ಪರಿಹಾರಕ್ಕೆ ಉತ್ತರವನ್ನು ಹೇಳುತ್ತಿದ್ದಾರೆ ಶ್ರೀಪಾದಾಚಾರ್ಯರು.

ಮೂಲ: — "ನ ಹಿ ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ ತತ್ಪಕ್ಷೇ"

**ಪ್ರತಿಪದಾರ್ಥ:-** ಬ್ರಹ್ಮಾತ್ಮೈಕ್ಯಸ್ಯ = ಜೀವಬ್ರಹ್ಮೈಕ್ಯಕ್ಕೆ. ಯಾಥಾರ್ಥ್ಯಂ = ಸತ್ಯವು. ತತ್ಪಕ್ಷೇ = ಆ ಭಗವಾನ್ ಶ್ರೀ ವೇದವ್ಯಾಸದೇವರ. ಪಕ್ಷೇ = ಸಿದ್ಧಾಂತದಲ್ಲಿ (ಅಥವಾ). ತತ್ = ಆ ಮಾಯಾವಾದಿಯ. ಪಕ್ಷೇ = ಮತದಲ್ಲಿ. ನ= ಇಲ್ಲ ಹಿ=ನಿಶ್ಚಯವು.

**ಭಾವಾರ್ಥ:—** ಜೀವಬ್ರಹ್ಮೈಕ್ಯವು ಯಥಾರ್ಥವೆಂದು ಶ್ರೀವೇದವ್ಯಾಸದೇವರ ಸಿದ್ಧಾಂತವು ಅಲ್ಲ. ಅಂದರೆ ಶ್ರೀವೇದವ್ಯಾಸ ದೇವನು ಜೀವಬ್ರಹ್ಮೈಕ್ಯವು ಅಯಥಾರ್ಥ ಅಂದರೆ ಸುಳ್ಳು ಎಂದೇ ಅಂಗೀಕರಿಸಿದ್ದಾರೆ. ಮತ್ತು ಮಾಯಾವಾದಿ ಮತದ ಪ್ರಕ್ರಿಯೆಯನ್ನು ಅನುಸರಿಸಿ ವಿಚಾರಮಾಡಿದಾಗಲೂ ಸಹ ಜೀವಬ್ರಹ್ಮೈಕ್ಯಕ್ಕೆ ಯಥಾರ್ಥತ್ವ ಇಲ್ಲ ಎಂದು ಸಿದ್ಧವಾಗುತ್ತದೆ. ಹೀಗೆ ಐಕ್ಯವು ಅಯಥಾರ್ಥವೇ ಆಗುತ್ತದೆ. ಆದ್ದರಿಂದ ಐಕ್ಯಪ್ರತಿಪಾದಕವಾದ ಮಾಯಾವಾದಿ ಶಾಸ್ತ್ರವು ಅನ್ಯಥಾ ಪ್ರತಿಪಾದಕವೆಂದು ಸಿದ್ಧವಾಯಿತು ಮತ್ತು ಐಕ್ಯವೇ ಇಲ್ಲವಾದ್ದರಿಂದ ವೇದಾದಿ ಶಾಸ್ತ್ರಗಳು ಐಕ್ಯಪ್ರತಿಪಾದಕವಾಗಲಾರವು. ಆದ್ದರಿಂದ ಐಕ್ಯಪ್ರತಿಪಾದಕತ್ವಾಭಾವವತಿ ವೇದಾದಿಶಾಸ್ತ್ರೇ ಐಕ್ಯಪ್ರತಿಪಾದಕತ್ವ ಪ್ರಕಾರಕ ಜ್ಞಾನಜನಕತ್ವವು ಅದ್ವೈತ ಶಾಸ್ತ್ರಕ್ಕೆ ಇರುವುದರಿಂದ ಹೇತುವಿಗೆ ಸ್ವರೂಪ ಸಿದ್ಧಿ ದೋಷವು ಇಲ್ಲ. ಇಷ್ಟು ಅಭಿಪ್ರಾಯದಿಂದ ಶ್ರೀಪಟ್ಟೀಕಾಕೃತ್ಪಾದರು ವ್ಯಾಖ್ಯಾನವನ್ನು ಮಾಡುತ್ತಿದ್ದಾರೆ ಅನ್ಯಥಾ ಪ್ರತಿಪಾದಕತ್ವಂ ಎಂಬ ಗ್ರಂಥದಿಂದ:—

**ಟೀಕಾ:-** ಅನ್ಯಥಾ ಪ್ರತಿಪಾದಕತ್ವಂ ಹ್ಯಯಥಾರ್ಥಪ್ರತಿಪಾದಕತ್ವಮ್। ಬ್ರಹ್ಮಾತ್ಮನೋರೇಕತ್ವಂ ಶಾಸ್ತ್ರವಿಷಯ-ತಯಾ ಪರಸ್ಯ ಅಭಿಮತಮ್। ನ ತತ್ಪರಮಾರ್ಥಭೂತಮ್। ಅತೋಽನ್ಯಥಾಪ್ರತಿಪಾದಕತ್ವಂ ಸಿದ್ಧಮ್।

**ಪ್ರತಿಪದಾರ್ಥ:-** ಅನ್ಯಥಾಪ್ರತಿಪಾದಕತ್ವಂ = ಅನ್ಯಥಾ ಪ್ರತಿಪಾದಕತ್ವವು, ಅಯಥಾರ್ಥ ಪ್ರತಿಪಾದಕತ್ವಂ = ಅಯಥಾರ್ಥ ಪ್ರತಿಪಾದಕತ್ವ (ಎಂದು), ಹಿ=ಪ್ರಮಾಣಸಿದ್ಧವು. ಶಾಸ್ತ್ರವಿಷಯತಯಾ=ಶಾಸ್ತ್ರಕ್ಕೆ ವಿಷಯ ಎಂದು. ಪರಸ್ಯ=ಮಾಯಾವಾದಿಗೆ, ಅಭಿಮತಂ=ಸಮ್ಮತವಾದಂತಹ. ತತ್=ಆ ಪೂರ್ವೋಕ್ತವಾದಂತಹ. ಬ್ರಹ್ಮಾತ್ಮನೋಃ= ಬ್ರಹ್ಮ ಮತ್ತು ಜೀವನಿಗೆ. ಏಕತ್ವಂ = ಐಕ್ಯವು, ನ ಪರಮಾರ್ಥಭೂತಂ = ಯಥಾರ್ಥವಲ್ಲ. ಅತಃ = ಆದ್ದರಿಂದ (ಮಾಯಾವಾದಿ ಶಾಸ್ತ್ರಕ್ಕೆ), ಅನ್ಯಥಾ ಪ್ರತಿಪಾದಕತ್ವಂ=ಅನ್ಯಥಾ ಪ್ರತಿಪಾದಕತ್ವವು, ಸಿದ್ಧಂ=ಸಿದ್ಧವಾಯಿತು.

**ಭಾವಾರ್ಥ:—** ಅನ್ಯಥಾ ಪ್ರತಿಪಾದಕತ್ವ ಎಂದರೆ ಅಯಥಾರ್ಥ ಪ್ರತಿಪಾದಕತ್ವ ಎಂದರ್ಥ. ಪ್ರಕೃತದಲ್ಲಿ ಶಾಸ್ತ್ರಕ್ಕೆ ವಿಷಯ ಎಂದು ಮಾಯಾವಾದಿಗೆ ಸಮ್ಮತವಾದಂತಹ ಜೀವಬ್ರಹ್ಮೈಕ್ಯವು ಯಥಾರ್ಥವಲ್ಲ ಅಂದರೆ ಅಯಥಾರ್ಥವಾಗಿದೆ ಆದ್ದರಿಂದ ಅದ್ವೈತಶಾಸ್ತ್ರವು ಅಯಥಾರ್ಥವಾದಐಕ್ಯಪ್ರತಿಪಾದಕವಾಯಿತು. ಆದ್ದರಿಂದ ಅಯಥಾರ್ಥ ಪ್ರತಿಪಾದಕತ್ವವು ಮಾಯಾವಾದಿ ಶಾಸ್ತ್ರದಲ್ಲಿ ಬಂದಿತು. ಅಯಥಾರ್ಥ ಪ್ರತಿಪಾದಕತ್ವವೇ ಅನ್ಯಥಾ ಪ್ರತಿಪಾದಕತ್ವ-ವಾದ್ದರಿಂದ ಅಯಥಾರ್ಥ ಪ್ರತಿಪಾದಕತ್ವವುಂಟು ಎಂದರೆ ಅನ್ಯಥಾ ಪ್ರತಿಪಾದಕತ್ವವಿದೆ ಎಂದರ್ಥ. ಆದ್ದರಿಂದ ಅನ್ಯಥಾ ಪ್ರತಿಪಾದಕತ್ವ ಎಂಬ ಹೇತುವಿಗೆ ಅಸಿದ್ಧಿಯು ಇಲ್ಲ.

ಹೀಗೆ ಮೇಲೆ ಹೇಳಿದಂತೆ ಆಚಾರ್ಯರ ವಾಕ್ಯವಾದ ಅನ್ಯಥಾ ಪ್ರತಿಪಾದಕತ್ವಂ ಎಂಬ ಶಬ್ದಕ್ಕೆ ಅಯಥಾರ್ಥ ಪ್ರತಿಪಾದಕತ್ವಂ ಎಂದು ಅರ್ಥೈಸಿದರೆ ಶ್ರೀಮದಾಚಾರ್ಯರು ಪ್ರಯೋಗಿಸಿದ ಹೇತುವಿಗೆ ವೈಯರ್ಥ್ಯವು ಬರುತ್ತದೆ ಎಂದು ಶಂಕಿಸುತ್ತಾರೆ "ನನು" ಎಂಬ ಮುಂದಿನ ಗ್ರಂಥದಿಂದ:—

**ಟೀಕಾ:-** ನನು 'ಯದ್ಯದ್ವೈತಪರಂ ಶಾಸ್ತ್ರಂ ಸ್ಯಾತ್ ತದಾ ಅನಾರಂಭಣೀಯಂ ಪ್ರಸಜ್ಯೇತ' ಇತಿ ಪ್ರಾಗುಕ್ತೋಪಾವಕಸ್ಯೋಕ್ತತ್ವಾತ್ ಪುನರ್ವೇತ್ವಭಿಧಾನಂ ವ್ಯರ್ಥಂ ಸ್ಯಾತ್। ನ ಚೈತದೇವಾಪಾವಕಾಭಿಧಾನಮಿತಿ ವಾಚ್ಯಮ್।

ತಥಾಸತಿ ಅನ್ಯಥಾಪ್ರತಿಪಾದಕತ್ವಾದಿತ್ಯಸ್ಯ ಬ್ರಹ್ಮಾತ್ಮೈಕ್ಯಪ್ರತಿಪಾದಕತ್ವಾದಿತ್ಯರ್ಥಃ ಸ್ಯಾತ್। ತಥಾ ಚ ದೃಷ್ಟಾಂತಾನುಪಪತ್ತಿಃ। 'ನ ಹಿ ಬ್ರಹ್ಮಾತ್ಮೈಕ್ಯಸ್ಯ' ಇತ್ಯುಪಪಾದನಾನುಪಯೋಗೋಸಂಗತತ್ವಂ ಚೇತಿ।

**ಪ್ರತಿಪದಾರ್ಥ:—** ನನು = ಪ್ರಶ್ನೆ, ಯದಿ = ಒಂದು ವೇಳೆ, ಶಾಸ್ತ್ರಂ = ಶಾಸ್ತ್ರವು, ಅದ್ವೈತಪರಂ ಸ್ಯಾತ್ = ಅದ್ವೈತ ಪರವಾಗಿ ಇದ್ದರೆ (ಜೀವಬ್ರಹ್ಮೈಕ್ಯಪ್ರತಿಪಾದಕವಾದರೆ), ತದಾ = ಆಗ, ಅನಾರಂಭಣೀಯಂ = ಪ್ರೇಕ್ಷಾವಂತರಿಂದ ಮಾಡಲ್ಪಟ್ಟ ಸ್ವೀಕಾರಕ್ಕೆ ವಿಷಯವಾಗದೇ ಇರುವುದು, ಪ್ರಸಜ್ಯೇತ = ಪ್ರಸಂಗ ಬರುತ್ತದೆ, ಇತಿ= ಇಂತೆಂದು, ಪ್ರಸಂಗೋಕ್ತೌ= ತರ್ಕವನ್ನು ಹೇಳುತ್ತಿರಲು, ಆಪದಕಸ್ಯ =ಆಪಾದಕಕ್ಕೆ, ಉಕ್ತತ್ವಾತ್ = ವಚನ ವಿಷಯತ್ವ ಇರುವುದರಿಂದ ಅಂದರೆ ಆಪಾದಕವನ್ನು ಹೇಳಿರುವುದರಿಂದ ಪುನಃ ಮತ್ತೊಮ್ಮೆ, ಹೇತ್ವಭಿದಾನಂ= (ಅನಾರಂಭಣೀಯತ್ವವನ್ನು ಸಾಧಿಸಲು ಅನ್ಯಥಾಪ್ರತಿಪಾದಕತ್ವ) ಎಂಬ ಹೇತುವನ್ನು ಹೇಳಿದ್ದು, ವ್ಯರ್ಥಂ ಸ್ಯಾತ್= ವ್ಯರ್ಥವಾಗುತ್ತದೆ. ಏತದೇವ = ಅನ್ಯಥಾಪ್ರತಿಪಾದಕತ್ವಾತ್ ಇತ್ಯಾಕಾರಕ ವಾಕ್ಯವೇ, ಆಪಾದಕಾಭಿದಾನಂ= ಆಪಾದಕವನ್ನು ಹೇಳುವಂತಹುದು, ಇತಿ = ಇಂತೆಂದು, ನ ಚ ವಾಚ್ಯಂ = ಹೇಳಬಾರದು, ತಥಾಸತಿ = ಅನ್ಯಥಾಪ್ರತಿಪಾದಕತ್ವಾತ್ ಎಂಬ ಹೇತು ವಾಕ್ಯದಿಂದ ಐಕ್ಯಪ್ರತಿಪಾದಕತ್ವ ರೂಪ ಆಪಾದಕವನ್ನು ಹೇಳುವುದಾದರೆ, ಅನ್ಯಥಾಪ್ರತಿಪಾದಕತ್ವಾತ್ ಇತ್ಯಸ್ಯ=ಅನ್ಯಥಾಪ್ರತಿಪಾದಕತ್ವಾತ್ ಎಂಬ ಹೇತು ವಾಕ್ಯಕ್ಕೆ ಬ್ರಹ್ಮಾತ್ಮೈಕ್ಯಪ್ರತಿಪಾದಕತ್ವಾತ್= ಬ್ರಹ್ಮಾತ್ಮೈಕ್ಯವನ್ನು ಹೇಳುವುದರಿಂದ, ಇತಿ= ಇಂತೆಂದು, ಅರ್ಥಃ=ಅರ್ಥವು, ಸ್ಯಾತ್=ಆಯಿತು. ತಥಾ ಚ= ಅನ್ಯಥಾ ಪ್ರತಿಪಾದಕತ್ವಂ ಎನ್ನುವುದಕ್ಕೆ ಐಕ್ಯಪ್ರತಿಪಾದಕತ್ವಂ ಎಂದು ಅರ್ಥವನ್ನು ಹೇಳಿದ್ದರಿಂದ, ದೃಷ್ಟಾಂತಾನುಪತ್ತಿಃ= ದೃಷ್ಟಾಂತಕ್ಕೆ ಅಯುಕ್ತತೆಯು. "ನ ಹಿ ಬ್ರಹ್ಮಾತ್ಮೈಕ್ಯಸ್ಯ" ಇತಿ="ನ ಹಿ ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ ತತ್ಪಕ್ಷೇಪ ಇತ್ಯಾಕಾರಕ ಗ್ರಂಥದಿಂದ, ಉಪಪಾದನ = ಜೀವಬ್ರಹ್ಮೈಕ್ಯಕ್ಕೆ ಅಯಥಾರ್ಥತ್ವವನ್ನು ಉಪಪಾದಿಸುವುದರ, ಅನುಪಯೋಗಃ= ಉಪಯೋಗವಿಲ್ಲದಂತಾಗುವುದು, ಚ= ಮತ್ತು, ಅಸಂಗತತ್ವಂ= ಪ್ರಕೃತ ಸಂಬಂಧರಾಹಿತ್ಯವು ಎಂದರೆ ಪ್ರಸಕ್ತವಾದ ವಿಷಯಕ್ಕೆ ಸಂಬಂಧ ಇಲ್ಲದಿರುವುದು, ಇತಿ= ಈ ರೀತಿಯಾಗಿ (ಮೂರು ದೋಷಗಳು ಬರುತ್ತದೆ ಎಂದು) ಮಾಯಾವಾದಿಯ ಅಭಿಪ್ರಾಯ.

**ಭಾವಾರ್ಥ:—** ಶಾಸ್ತ್ರವು ಜೀವಬ್ರಹ್ಮೈಕ್ಯವನ್ನು ಹೇಳುವುದಾದರೆ ಅನಾರಂಭಣೀಯವಾಗಬೇಕಾದೀತು ಎಂದು ತರ್ಕವನ್ನು ಹೇಳಿದಾಗ ಅನಾರಂಭಣೀಯತ್ವವನ್ನು ಆಪಾದಿಸಲು ಐಕ್ಯಪ್ರತಿಪಾದಕತ್ವ ರೂಪ ಆಪಾದಕವನ್ನು ಸೇರಿಸಿಕೊಳ್ಳಬೇಕು ಎಂದು ನೀವು (ಶ್ರೀಮಟ್ಟೀಕಾಕೃತ್ಪಾದರು) ಹೇಳಿದ್ದರಿಂದ ಈಗ ಶ್ರೀಮದಾಚಾರ್ಯರು ಪ್ರಯೋಗಿಸಿದಂತಹ ಅನ್ಯಥಾ ಪ್ರತಿಪಾದಕತ್ವಾತ್ ಎಂಬ ಹೇತು ವಾಕ್ಯವು ವ್ಯರ್ಥವಾಗುತ್ತದೆ. ಹಾಗಲ್ಲ ಐಕ್ಯಪ್ರತಿಪಾದಕತ್ವ ರೂಪ ಆಪಾದಕವನ್ನೇ ಅನ್ಯಥಾ ಪ್ರತಿಪಾದಕತ್ವ ಎಂಬ ವಾಕ್ಯದಿಂದ ಆಚಾರ್ಯರು ಹೇಳುತ್ತಿದ್ದಾರೆ ಎಂದು ನಾವು (ದ್ವೈತಿಗಳು) ಹೇಳುತ್ತೇವೆ. ಆದ್ದರಿಂದ ಆಚಾರ್ಯರ ವಾಕ್ಯಕ್ಕೆ ವೈಯರ್ಥ್ಯ ಬರುವುದಿಲ್ಲ ಎಂದು ಹೇಳಲು ನಿಮಗೆ ಬರುವುದಿಲ್ಲ. ಏಕೆಂದರೆ ಹಾಗೆ ನೀವು ಅನ್ಯಥಾಪ್ರತಿಪಾದಕತ್ವ ಶಬ್ದಕ್ಕೆ ಐಕ್ಯಪ್ರತಿಪಾದಕತ್ವ ಎಂದು ಅರ್ಥವನ್ನು ಮಾಡಿದರೆ ಆಗ ದೃಷ್ಟಾಂತವು ಕೂಡುವುದಿಲ್ಲ. ಏಕೆಂದರೆ ಮೊದಲು "ಯದಿ ಅನ್ಯಥಾಪ್ರತಿಪಾದಕತ್ವಂ ಸ್ಯಾತ್ ತರ್ಹಿ ಅನಾರಂಭಣೀಯತ್ವಂಸ್ಯಾತ್" ಎಂದು ತರ್ಕವನ್ನುಮಾಡಿದ್ದಿರಿ. ಆಗ ಯತ್ರ ಅನ್ಯಥಾಪ್ರತಿಪಾದಕತ್ವಂ ತತ್ರ ಅನಾರಂಭಣೀಯತ್ವಂ ಎಂದು ವ್ಯಾಪ್ತಿಯನ್ನು ಹೇಳಿ ಬೌದ್ಧ ಶಾಸ್ತ್ರದಲ್ಲಿ ಅನ್ಯಥಾಪ್ರತಿಪಾದಕತ್ವವಿದೆ ಮತ್ತು ಅನಾರಂಭಣೀಯತ್ವವು ಇದೆ ಎಂದು ವ್ಯಾಪ್ತಿಯನ್ನು ತಿಳಿಸಿದ್ದಿರಿ. ಆದರೆ ಈಗ ಅನ್ಯಥಾಪ್ರತಿಪಾದಕತ್ವ ಶಬ್ದಕ್ಕೆ ಐಕ್ಯಪ್ರತಿಪಾದಕತ್ವ ಎಂದು ಅರ್ಥ ಮಾಡಿದರೆ 'ಯದಿ ಐಕ್ಯಪ್ರತಿಪಾದಕತ್ವಂ ಸ್ಯಾತ್ ತರ್ಹಿ ಅನಾರಂಭಣೀಯತ್ವಂ ಸ್ಯಾತ್' ಎಂದು ತರ್ಕವನ್ನು ಹೇಳಿದಂತಾಯಿತು. ಹೀಗೆ ಹೇಳಿದರೆ ಬೌದ್ಧಶಾಸ್ತ್ರದಲ್ಲಿ ವ್ಯಾಪ್ತಿಯು ಬರುವುದಿಲ್ಲ. ಏಕೆಂದರೆ ಬೌದ್ಧ ಶಾಸ್ತ್ರವು ಐಕ್ಯಪ್ರತಿಪಾದಕವಲ್ಲ. ಆದ್ದರಿಂದ ಐಕ್ಯಪ್ರತಿಪಾದಕತ್ವ ಎಂಬ ಆಪಾದಕವು ಬೌದ್ಧಶಾಸ್ತ್ರದಲ್ಲಿ ಇಲ್ಲ. ಹೀಗೆ ವ್ಯಾಪ್ತಿಗೆ ದೃಷ್ಟಾಂತವಿಲ್ಲ ಎಂದರೆ ಮೊದಲನೇ ದೋಷವು.

ಯದಿ ಐಕ್ಯಪ್ರತಿಪಾದಕಂ ಸ್ಯಾತ್ ತರ್ಹಿ ಅನಾರಂಭಣೀಯಂ ಸ್ಯಾತ್ ಎಂದು ತರ್ಕವನ್ನು ಮಾಡಿದಾಗ ಅಯಥಾರ್ಥ ಪ್ರತಿಪಾದಕತ್ವದ ಪ್ರಶ್ನೆಯೇ ಇಲ್ಲ. ಅಂದರೆ ಜೀವಬ್ರಹ್ಮೈಕ್ಯಕ್ಕೆ ಯಥಾರ್ಥತ್ವವುಂಟೋ ಅಥವಾ ಇಲ್ಲವೋ ಎಂಬ ಪ್ರಶ್ನೆಯೇ ಬರದೆ ಇರುವಾಗ ಜೀವಬ್ರಹ್ಮೈಕ್ಯಕ್ಕೆ ಯಥಾರ್ಥತ್ವವಿಲ್ಲ ಎಂದು "ನ ಹಿ ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ ತತ್ಪಕ್ಷೇ" ಎಂಬ ಗ್ರಂಥದಿಂದ ಹೇಳಿದ್ದು ಉಪಯುಕ್ತವಲ್ಲ ಎಂಬುದು ಎರಡನೇ ದೋಷವು.

ಐಕ್ಯಪ್ರತಿಪಾದಕತ್ವವನ್ನು ಹೇಳಿದಾಗ ಅನಾರಂಭಣೀಯತ್ವವು ಹೇಗೆ ಬರುತ್ತದೆ ಎಂದು ಸಮರ್ಥಿಸಬೇಕೇ ವಿನಹ ಅದನ್ನು ಸಮರ್ಥಿಸದೆ ಜೀವಬ್ರಹ್ಮೈಕ್ಯಕ್ಕೆ ಯಥಾರ್ಥತ್ವವಿಲ್ಲವೆಂದು ಹೇಳಿದ್ದು ಪ್ರಕೃತವಾದ ಅನಾರಂಭಣೀಯತ್ವಕ್ಕೆ ಸಂಬಂಧವಾದುದು ಅಲ್ಲ ಎಂದು ಮೂರನೇ ದೋಷವು.

ಈ ಮೇಲೆ ಹೇಳಿದಂತೆ ಮೂರು ದೋಷಗಳನ್ನು ಆಚಾರ್ಯರ ವಾಕ್ಯಕ್ಕೆ ಹೇಳಿದಾಗ ಆ ದೋಷಗಳು ಇಲ್ಲ ಎನ್ನುವುದನ್ನು ಶ್ರೀಮಟ್ಟೀಕಾಕೃತ್ಪಾದರು ಪ್ರತಿಪಾದಿಸುತ್ತಿದ್ದಾರೆ 'ಮೈವಂ' ಎಂಬ ಮುಂದಿನ ಗ್ರಂಥದಿಂದ:—

**ಟೀಕಾ:—** ಮೈವಮ್। ಅಭಿಪ್ರಾಯಸದ್ಭಾವಾತ್। ತಥಾಹಿ। ಯದಿ ಅದ್ವೈತ ಮೇವ ಶಾಸ್ತ್ರಾರ್ಥಃ ಸ್ಯಾತ್ ತದಾ ಅನಾರಂಭಣೀಯಂ ಸ್ಯಾತ್ ಇತ್ಯುಕ್ತೇ ನಿಮಿತ್ತನೈಮಿತ್ತಿಕಭಾವಸ್ಯ ಅಸ್ಫುಟತ್ವಾತ್ ಕಥಮಿತ್ಯಾಕಾಂಕ್ಷಾಯಾಂ ಅನ್ಯಥಾ-ಪ್ರತಿಪಾದಕತ್ವಾತ್ ಇತ್ಯುಕ್ತಮ್। ಯದಿ ಶಾಸ್ತ್ರಾರ್ಥೋಽದ್ವೈತಂ ಸ್ಯಾತ್ ತದಾ ಶಾಸ್ತ್ರಮನ್ಯಥಾಪ್ರತಿಪಾದಕಂ ಸ್ಯಾತ್। ತತಶ್ಚ ಅನಾರಂಭಣೀಯಂ ಪ್ರಸಜ್ಯೇತ ಇತಿ। ಅದ್ವೈತಸ್ಯೈವ ಶಾಸ್ತ್ರಾರ್ಥತ್ವೇ ಶಾಸ್ತ್ರಸ್ಯ ಅಯಥಾರ್ಥ ಪ್ರತಿಪಾದಕತ್ವಂ ಕಥಂ ? ಇತ್ಯತೋ "ನ ಹಿ ಬ್ರಹ್ಮಾತ್ಮೈಕ್ಯಸ್ಯ" ಇತ್ಯಭಿಹಿತಂ। ತತ್ರೋಪಪತ್ತಿಸ್ತತ್ಪಕ್ಷೇ ಇತಿ।

**ಪ್ರತಿಪದಾರ್ಥ:—** ಏವಂ = ಈ ರೀತಿಯಾಗಿ, ಮಾ = ಹೇಳಬೇಡ । ಅಭಿಪ್ರಾಯಸದ್ಭಾವತ್ = ಮುಖ್ಯವಾದ ಅಭಿಪ್ರಾಯವಿರುವುದರಿಂದ, ತಥಾಹಿ = ಆ ಅಭಿಪ್ರಾಯವೇನೆಂದರೆ, ಯದಿ = ಒಂದು ವೇಳೆ, ಅದ್ವೈತಮೇವ= ಜೀವಬ್ರಹ್ಮೈಕ್ಯವೇ, ಶಾಸ್ತ್ರಾರ್ಥಃ ಸ್ಯಾತ್=ಶಾಸ್ತ್ರಾರ್ಥವಾದರೆ, ತದಾ=ಆಗ, (ಶಾಸ್ತ್ರವು), ಅನಾರಂಣೀಯಂ ಸ್ಯಾತ್ = ಪ್ರೇಕ್ಷಾವತ್ಕರ್ತೃಕ ಸ್ವೀಕಾರಾ ವಿಷಯವಾಗಬೇಕಾಗುತ್ತದೆ, ಇತ್ಯುಕ್ತೇ (ಸತಿ) = ಈ ರೀತಿಯಾಗಿ ಹೇಳಲ್ಪಡುತ್ತಿರಲು, ನಿಮಿತ್ತ ನೈಮಿತ್ತಿಕಭಾವಸ್ಯ=ಪ್ರಯೋಜ್ಯ ಪ್ರಯೋಜಕ ಭಾವದ, ಅಸ್ಫುಟತ್ವಾತ್=ಸ್ಪಷ್ಟತೆ ಇಲ್ಲವಾದ್ದರಿಂದ (ಸರಿಯಾಗಿ ತಿಳಿಯುವುದಿಲ್ಲವಾದ್ದರಿಂದ), ಕಥಂ? = (ಇದು) ಹೇಗೆ, ಇತಿ = ಇಂತೆಂದು, ಆಕಾಂಕ್ಷಾಯಾಂ= ತಿಳಿಯುವ ಇಚ್ಛೆಯು ಬರುತ್ತಿರಲು, ಅನ್ಯಥಾ ಪ್ರತಿಪಾದಕತ್ವಾತ್=ಅನ್ಯಥಾ ಪ್ರತಿಪಾದಕತ್ವ ಎಂಬ ಅಂಗವನ್ನು ತಿಳಿಸಿಕೊಡುವ ಹೇತು ವಾಕ್ಯವು ಹೇಳಲ್ಪಟ್ಟಿತು. ಆದರಿಂದ, ಯದಿ=ಒಂದು ವೇಳೆ, ಶಾಸ್ತ್ರಾರ್ಥಃ= ಶಾಸ್ತ್ರಾರ್ಥವು, ಅದ್ವೈತಂ ಸ್ಯಾತ್ = ಜೀವಬ್ರಹ್ಮೈಕ್ಯವಾದರೆ, ತದಾ = ಆಗ, ಶಾಸ್ತ್ರಂ = ಶಾಸ್ತ್ರವು, ಅನ್ಯಥಾ-ಪ್ರತಿಪಾದಕಂ ಸ್ಯಾತ್ = ಅಯಥಾರ್ಥ ಜ್ಞಾನಜನಕವಾಗಬೇಕಾಗುವುದು. ಆದರಿಂದ ಅನಾರಂಭಣೀಯಂ ಪ್ರಸಜ್ಯೇತ= ಪ್ರೇಕ್ಷಾವತ್ಕರ್ತೃಕ ಸ್ವೀಕಾರಕ್ಕೆ ವಿಷಯವಾಗದಿರುವ ಪ್ರಸಂಗ ಬರುವುದು. ಇತಿ= ಇಂತೆಂದು ಅಭಿಪ್ರಾಯವಿರುತ್ತದೆ. (ಇಷ್ಟೇ ಅಲ್ಲದೆ), ಅದ್ವೈತಸ್ಯೈವ=ಜೀವಬ್ರಹ್ಮೈಕ್ಯಕ್ಕೇ, ಶಾಸ್ತ್ರಾರ್ಥತ್ವೇ ಸತಿ= ಶಾಸ್ತ್ರಪ್ರತಿಪಾದ್ಯತ್ವವು ಇದ್ದರೆ, ಶಾಸ್ತ್ರಸ್ಯ= ಶಾಸ್ತ್ರಕ್ಕೆ, ಅಯಥಾರ್ಥಪ್ರತಿಪಾದಕತ್ವಂ= ಅಯಥಾರ್ಥ ಜ್ಞಾನಜನಕತ್ವವು, ಕಥಂ= ಹೇಗೆ ಕೊಡುತ್ತವೆ? ಇತ್ಯತಃ = ಈ ರೀತಿಯಾಗಿ ಪ್ರತಿವಾದಿಯು ಹೇಳುವುದರಿಂದ, "ನ ಹಿ ಬ್ರಹ್ಮಾತ್ಮೈಕ್ಯಸ್ಯ" ಇತ್ಯಭಿಹಿತಂ = ನ ಹಿ-ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ ಎಂಬ ಗ್ರಂಥದಿಂದ ಹೇಳಲ್ಪಟ್ಟಿತು. ತತ್ರ= ಆ ಜೀವಬ್ರಹ್ಮೈಕ್ಯಕ್ಕೆ ಅಯಥಾರ್ಥತ್ವ (ಸುಳ್ಳು) ಎಂಬ ವಿಷಯದಲ್ಲಿ, ಉಪಪತ್ತಿಃ= ಯುಕ್ತಿಯು, ತತ್ಪಕ್ಷೇ ಇತಿ=ತತ್ಪಕ್ಷೇ ಎಂಬ ಗ್ರಂಥದಿಂದ ಹೇಳಲ್ಪಟ್ಟಿದೆ.

**ಭಾವಾರ್ಥ:—** ಇಲ್ಲಿ ಆಚಾರ್ಯರಿಗೆ ಐಕ್ಯಪ್ರತಿಪಾದಕತ್ವದಿಂದಲೇ ಅನಾರಂಭಣೀಯತ್ವವನ್ನು ಆಪಾದಿಸಲು ಅಭಿಪ್ರಾಯವು ಇರದೆ ಐಕ್ಯಪ್ರತಿಪಾದಕತ್ವದಿಂದ ಅನ್ಯಥಾ ಪ್ರತಿಪಾದಕತ್ವವನ್ನು ಆಪಾದಿಸಿ ಅನ್ಯಥಾ ಪ್ರತಿಪಾದಕತ್ವದಿಂದ ಅನಾರಂಭ-ಣೀಯತ್ವವನ್ನು ಆಪಾದಿಸಲು ಅಪೇಕ್ಷೆ ಇದೆ. ಅದು ಹೇಗೆಂದರೆ ಒಂದು ವೇಳೆ ಶಾಸ್ತ್ರವು ಐಕ್ಯಪ್ರತಿಪಾದಕವಾದರೆ

ಆಗ ಶಾಸ್ತ್ರವು ಅನಾರಂಭಣೀಯವಾಗಬೇಕಾಗುತ್ತದೆ ಎಂಬ ಅಭಿಪ್ರಾಯದಿಂದ ಯದಿ ಶಾಸ್ತ್ರಂ ಐಕ್ಯಪ್ರತಿಪಾದಕಂ ಸ್ಯಾತ್ ತರ್ಹಿ ಅನಾರಂಭಣೀಯಂ ಸ್ಯಾತ್ ಎಂದು ತರ್ಕವನ್ನು ಮಾಡಿದರೆ ಐಕ್ಯಪ್ರತಿಪಾದಕತ್ವವಿದ್ದರೆ ಅನಾರಂಭ ಅನಾರಂಭಣೀಯತ್ವವು ಏಕೆ ಬರಬೇಕು ಅಂದರೆ ಐಕ್ಯಪ್ರತಿಪಾದಕತ್ವಕ್ಕೆ ಆನಾರಂಭಣೀಯತ್ವದಿಂದ ವ್ಯಾಪ್ತಿಯು ಇರುವುದು ಅನುಭೂತವಾಗಿಲ್ಲವಾದ್ದರಿಂದ ಈ ತರ್ಕದಲ್ಲಿ ವ್ಯಾಪ್ತಿಯು ಇಲ್ಲದಂತಾಗುತ್ತದೆ ಮತ್ತು ಐಕ್ಯಪ್ರತಿ ಪಾದಕತ್ವವು ಇರಲಿ ಅನಾರಂಭಣೀಯತ್ವವು ಬೇಡ ಎಂದು ಅಪ್ರಯೋಜಕತ್ವ ಶಂಕಾವನ್ನು ಮಾಡಬಹುದಾದ್ದರಿಂದ ಅನಾರಂಭಣೀಯತ್ವವನ್ನು ಐಕ್ಯಪ್ರತಿಪಾದಕತ್ವದಿಂದ ಸಾಧಿಸುವ ಬಗೆ ಹೇಗೆ ಎಂದು ಶಂಕಾ ಬಂದರೆ ಆ ಶಂಕಾ ಪರಿಹಾರಕ್ಕೋಸ್ಕರವಾಗಿ ಶ್ರೀಮದಾಚಾರ್ಯರು ಅನ್ಯಥಾ ಪ್ರತಿಪಾದಕತ್ವಾತ್ ಎಂದು ಪ್ರಯೋಗಿಸಿದ್ದಾರೆ. ಈ ವಾಕ್ಯ ದಿಂದ ಅನಾರಂಭಣೀಯತ್ವವನ್ನು ಅಪಾದಕವನ್ನಾಗಿ ಹೇಳಿದ್ದಾರೆ. ಇದರಿಂದ ಯದಿ ಶಾಸ್ತ್ರಂ ಐಕ್ಯಪ್ರತಿಪಾದಕಂ ಸ್ಯಾತ್ ತರ್ಹಿ ಅನ್ಯಥಾಪ್ರತಿಪಾದಕಂ ಸ್ಯಾತ್ । ಯದಿ ಅನ್ಯಥಾಪ್ರತಿಪಾದಕಂ ಸ್ಯಾತ್ ತರ್ಹಿ ಅನಾರಂಭಣೀಯಂ ಸ್ಯಾತ್ ಎಂದು ಹೇಳಿದಂತೆ ಆಯಿತು. ಇದರಿಂದ ಐಕ್ಯ ಪ್ರತಿಪಾದಕತ್ವಕ್ಕೆ ವ್ಯಾಪಕವಾದಂತಹ ಅನ್ಯಥಾ ಪ್ರತಿಪಾದಕತ್ವಕ್ಕೆ ವ್ಯಾಪಕವಾದಂತಹ ಅನಾರಂಭಣೀಯತ್ವವು ಐಕ್ಯ ಪ್ರತಿಪಾದಕತ್ವಕ್ಕೆ ಪರಂಪರಯಾ ವ್ಯಾಪಕವಾಯಿತು. ಹೀಗೆ ಹೇಳಿದ್ದರಿಂದ 'ಯತ್ರ ಅನ್ಯಥಾ ಪ್ರತಿಪಾದಕತ್ವಂ ತತ್ರ ಅನಾರಂಭಣೀಯತ್ವಂ ಎಂಬ ವ್ಯಾಪ್ತಿಗೆ ಬೌದ್ಧ ಶಾಸ್ತ್ರವು ದೃಷ್ಟಾಂತವಾಗಿರುವುದರಿಂದ ವ್ಯಾಪ್ತಿಗೆ ದೃಷ್ಟಾಂತಾನುಪಪತ್ತಿ ಎಂಬ ದೋಷವಿಲ್ಲ. ಇನ್ನು ಐಕ್ಯಪ್ರತಿಪಾದಕತ್ವಕ್ಕೂ ಅನ್ಯಥಾ ಪ್ರತಿಪಾದಕತ್ವಕ್ಕೂ ವ್ಯಾಪ್ತಿಯು ಕಂಡಿಲ್ಲವಾದ್ದರಿಂದ ಇದು ಹೇಗೆ ತರ್ಕವಾಗುತ್ತದೆ ಎಂದರೆ ಇಲ್ಲಿ ಅನುಪಪತ್ತಿ ಎಂಬ ವ್ಯಾಪ್ತಿಯನ್ನು ಅಂಗೀಕಾರ ಮಾಡುವುದರಿಂದ ದೃಷ್ಟಾಂತವಿಲ್ಲ ಎಂದು ಹೇಳುವುದು ತಪ್ಪು.

ಶಾಸ್ತ್ರವು ಜೀವಬ್ರಹ್ಮೈಕ್ಯ ಪ್ರತಿಪಾದಕವಾದರೆ ಅಯಥಾರ್ಥ ಪ್ರತಿಪಾದಕತ್ವವು ಶಾಸ್ತ್ರಕ್ಕೆ ಏಕೆ ಬರಬೇಕು ಎಂದು ಪ್ರಶ್ನೆ ಬಂದರೆ "ನಹಿ ಬ್ರಹ್ಮಾತ್ಮೈಕ್ಯಸ್ಯಯಾಥಾರ್ಥ್ಯಂ ತ್ವತ್ಪಕ್ಷೇ"ತ ಎಂಬ ಗ್ರಂಥದಿಂದ ಉತ್ತರವನ್ನು ಹೇಳುತ್ತಿ ದ್ದಾರೆ, ಅಂದರೆ ಜೀವಬ್ರಹ್ಮೈಕ್ಯಕ್ಕೆ ಯಾಥಾರ್ಥ್ಯವು ಇಲ್ಲ ಎಂದು ಹೇಳಿದ್ದರಿಂದ ಶಾಸ್ತ್ರಕ್ಕೆ ಅಯಥಾರ್ಥ ಪ್ರತಿ ಪಾದಕತ್ವವು ಬರುತ್ತದೆ.

ಇನ್ನು ಅದ್ವೈತವೇ ಶಾಸ್ತ್ರಾರ್ಥವಾದರೆ ಶಾಸ್ತ್ರವು ಯಥಾರ್ಥ ಪ್ರತಿಪಾದಕವೇ ಆಗಬಹುದೇ ವಿನಹ ಶಾಸ್ತ್ರಕ್ಕೆ ಅಯಥಾರ್ಥ ಪ್ರತಿಪಾದಕತ್ವವು ಹೇಗೆ ಬರುತ್ತದೆ ಎಂಬ ಪ್ರಶ್ನೆ ಬಂದರೆ ಅದಕ್ಕೆ ಉತ್ತರವೇನೆಂದರೆ ಜೀವ ಬ್ರಹ್ಮೈಕ್ಯಕ್ಕೆ ಅಯಥಾರ್ಥ್ಯತ್ವವನ್ನು ಹೇಳಿ ಅದನ್ನುಸಮರ್ಥಿಸಬೇಕಾದ್ದರಿಂದ "ನಹಿ ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ ತತ್ಪಕ್ಷೆ ಎಂಬ ಗ್ರಂಥದಿಂದ ಉಪಪಾದನೆ ಮಾಡಿದ್ದು ಅನಾರಂಭಣೀಯತ್ವ ಸಮರ್ಥನಕ್ಕೆ ಉಪಯುಕ್ತವಾಗಿದೆ ಆದ್ದರಿಂದ ಉಪಪಾದನಾನುಪಯೋಗ ಎಂಬ ದೋಷವಿಲ್ಲ. ಈ ರೀತಿಯಾಗಿ ಐಕ್ಯವು ಅಯಥಾರ್ಥವಾದ್ದರಿಂದ ಶಾಸ್ತ್ರಕ್ಕೆ ಆಯಥಾರ್ಥವಾದ ಐಕ್ಯ ಪ್ರತಿಪಾದಕತ್ವವು ಬರುತ್ತದೆ. ಆಗ ಅನಾರಂಭಣೀಯತ್ವವು ಬರುತ್ತದೆ. ಆದ್ದರಿಂದ ಆನಾರಂಭಣೀಯತ್ವಕ್ಕೆ ಅನ್ಯಥಾ ಪ್ರತಿಪಾದಕತ್ವದಿಂದ ಸಂಬಂಧವಿದ್ದು ಅನ್ಯಥಾ ಪ್ರತಿಪಾದಕತ್ವದಲ್ಲಿನ ಅನ್ಯಥಾ ಎಂಬ ಶಬ್ದದಿಂದ ಐಕ್ಯದ ಆಯಥಾರ್ಥತ್ವವು ವಿವಕ್ಷಿತವಾಗಿದೆ. ಹೀಗೆ ಅನಾರಂಭಣೀಯತ್ವವನ್ನು ಸಾಧಿಸುವ "ಅನ್ಯಥಾ ಪ್ರತಿಪಾದಕತ್ವ"ದಲ್ಲಿನ ಐಕ್ಯದ ಅಯಥಾರ್ಥವು ಸೇರಿದ್ದರಿಂದ ಅನಾರಂಭಣೀಯತ್ವ ಸಾಧನೆಗೆ ಐಕ್ಯ ಅಯಥಾರ್ಥ್ಯ ಪ್ರತಿಪಾದನೆಯು 'ಘಟಿತ ಜ್ಞಾನಂ ಪ್ರತಿ ಘಟಕಜ್ಞಾನಸ್ಯ ಕಾರಣತ್ವಂ' ಎಂಬ ನಿಯಮಾನುಸಾರ ವಾಗಿ ಸಂಗತವೇ ಆಗಿರುತ್ತದೆ.

ಜೀವಬ್ರಹ್ಮೈಕ್ಯದ ಅಯಥಾರ್ಥತ್ವ ವಿಷಯದಲ್ಲಿ ಯುಕ್ತಿಯನ್ನು ಮಾಯಾವಾದಿಮತ ರೀತ್ಯ ನಿರೂಪಿಸು ತ್ತಿದ್ದಾರೆ "ಐಕ್ಯಮೇವ ಎಂಬ ಗ್ರಂಥದಿಂದ.

**ಟೀಕಾ:-** ಐಕ್ಯಮೇವ ಶಾಸ್ತ್ರಾರ್ಥಶ್ಚೇತ್ ಬ್ರಹ್ಮಾತಿರಿಕ್ತಂ ಸರ್ವಮಪರಮಾರ್ಥಭೂತಂ ಸ್ಯಾತ್ । ಐಕ್ಯಂ ಚ ಬ್ರಹ್ಮವ್ಯತಿರಿಕ್ತತ್ವಾದಪರಮಾರ್ಥಭೂತಂ ತತ್ಪ್ರತಿಪಾದಕಂ ಚ ಶಾಸ್ತ್ರಂ ಕಥಮನ್ಯಥಾಪ್ರತಿಪಾದಕಂ ನ ಭವೇತ್ ।

**ಪ್ರತಿಪದಾರ್ಥ:-** ಐಕ್ಯಮೇವ=ಐಕ್ಯವೇ, ಶಾಸ್ತ್ರಾರ್ಥಃ ಚೇತ್=ಶಾಸ್ತ್ರದಿಂದ ಬೋಧ್ಯವಾದರೆ, ಬ್ರಹ್ಮಾತಿರಿಕ್ತಂ= ಬ್ರಹ್ಮನ ದೆಸೆಯಿಂದ ಭಿನ್ನವಾದಂತಹ, ಸರ್ವಂ=ಸಮಸ್ತವಾವಂಥಾದ್ದು, ಅಪರಮಾರ್ಥಭೂತಂ ಸ್ಯಾತ್=ಮಿಥ್ಯಾ ವಾಗಬೇಕು. ಐಕ್ಯಂ ಚ = ಐಕ್ಯವಾದರೂ, ಬ್ರಹ್ಮಾತಿರಿಕ್ತತ್ವಾತ್ = ಬ್ರಹ್ಮನ ದೆಸೆಯಿಂದ ಭಿನ್ನವಾದ್ದರಿಂದ, ಅಪರಮಾರ್ಥಭೂತಂ = ಸುಳ್ಳಾಗಿರುತ್ತದೆ (ಅಯಥಾರ್ಥವಾಗಿರುತ್ತದೆ), ತತ್ಪ್ರತಿಪಾದಕಂ ಚ = ಆ ಐಕ್ಯವನ್ನು ಪ್ರತಿಪಾದನೆ ಮಾಡತಕ್ಕಂತಹ, ಶಾಸ್ತ್ರಂ=ಶಾಸ್ತ್ರವು, ಅನ್ಯಥಾ ಪ್ರತಿಪಾದಕಂ= ಅಯಥಾರ್ಥ ಪ್ರತಿಪಾದಕವು, ಕಥಂ ನ ಭವೇತ್ = ಹೇಗೆ ಆಗುವುದಿಲ್ಲ? ಅಂದರೆ ನಿಶ್ಚಯವಾಗಿ ಅನ್ಯಥಾ ಪ್ರತಿಪಾದಕವಾಗಿರುತ್ತದೆ,

**ಟೀಕಾ:-** ಅಥ ಬ್ರಹ್ಮಾತ್ಮೈಕ್ಯಂ ತತ್ಸ್ವರೂಪಾತಿರಿಕ್ತಮಪಿ ಪರಮಾರ್ಥಸತ್ ಅಂಗೀಕ್ರಿಯತೇ ತದಾ ತೇನೈವ ದ್ವೈತಾಪತ್ತೇಃ, ಅದ್ವೈತಪರಂ ಶಾಸ್ತ್ರಮಿತ್ಯತ್ಯ ಹಾನಿಃ ಸ್ಯಾದಿತ್ಯಾಹ.

**ಪ್ರತಿಪದಾರ್ಥ:-** ಅಥ=ಒಂದು ವೇಳೆ, ಬ್ರಹ್ಮಾತ್ಮೈಕ್ಯಂ=ಜೀವಬ್ರಹ್ಮೈಕ್ಯವು, ತತ್ಸ್ವರೂಪಾತಿರಿಕ್ತಂ ಅಪಿ= ಬ್ರಹ್ಮಸ್ವರೂಪದ ದೆಸೆಯಿಂದ ಭಿನ್ನವಾದರೂ ಕೂಡ, ಪರಮಾರ್ಥ ಸತ್=ಅತ್ಯಂತ ಸತ್ಯವಾಗಿದೆ (ಪಾರಮಾರ್ಥಿಕ ಸತ್ಯವಾಗಿದೆ) ಎಂದು, ಅಂಗೀಕ್ರಿಯತೆ=ಅಂಗೀಕರಿಸಲ್ಪಟ್ಟರೆ, ತದಾ=ಆಗ, ತೇನೈವ=ಆ ಬ್ರಹ್ಮಸ್ವರೂಪದ ದೆಸೆ ಯಿಂದ ಭಿನ್ನವಾದ ಪಾರಮಾರ್ಥಿಕ ಸತ್ಯವಾದ ಐಕ್ಯದಿಂದ, ದ್ವೈತಾಪತ್ತೇಃ = ಎರಡನೇ ಸತ್ಯವಸ್ತುವನ್ನು ಅಂಗೀ ಕಾರ ಮಾಡಬೇಕಾದುದರಿಂದ, ಅದ್ವೈತಪರಂ ಶಾಸ್ತ್ರಂ=ಶಾಸ್ತ್ರವು ಅದ್ವೈತವನ್ನು ಹೇಳುತ್ತದೆ, ಇತ್ಯಸ್ಯ=ಎನ್ನು ವುದಕ್ಕೆ, ಹಾನಿಃ ಸ್ಯಾತ್=ತ್ಯಾಗವಾದಂತಾಯಿತು, ಇತಿ, ಇಂತೆಂದು, ಆಹ=ಶ್ರೀಮದಾಚಾರ್ಯರು ಹೇಳುತ್ತಿ ದ್ದಾರೆ "ಅದ್ವೈತಹಾನೇಃ" ಎಂಬ ಮುಂದಿನ ಗ್ರಂಥದಿಂದ.

**ಭಾವಾರ್ಥ:-** ಜೀವಬ್ರಹ್ಮೈಕ್ಯವು ಬ್ರಹ್ಮಸ್ವರೂಪದ ದೆಸೆಯಿಂದ ಭಿನ್ನ ಎಂದು ಹೇಳಿದರೆ ಬ್ರಹ್ಮಾತಿರಿಕ್ತವಾದುದು ಅಯಥಾರ್ಥವಾಗುವುದರಿಂದ ಐಕ್ಯವು ಅಯಥಾರ್ಥವಾಗಿ ತತ್ಪ್ರತಿಪಾದಕವಾದ ವೇದಾದಿ ಶಾಸ್ತ್ರಕ್ಕೆ ಮತ್ತು ಮಾಯಾ ವಾದಿ ಶಾಸ್ತ್ರಕ್ಕೆ ಅಯಥಾರ್ಥಪ್ರತಿಪಾದಕತ್ವವು ಬಂದು ಅನಾರಂಭಣೀಯತ್ವವು ಬರಬೇಕಾಗುತ್ತದೆ ಎಂದು ನೀವು ಹೇಳುವಿರಷ್ಟೇ? ಆದರೆ ನಾನು ಹಾಗೆ ಐಕ್ಯವು ಅಯಥಾರ್ಥ ಎಂದು **ಹೇಳುವುದಿಲ**. ಹಾಗಾದರೆ ನನ್ನ ಅಭಿಪ್ರಾಯ ವೇನೆಂದರೆ ಜೀವಬ್ರಹ್ಮೈಕ್ಯವು ಬ್ರಹ್ಮಸ್ವರೂಪದ ದೆಸೆಯಿಂದ ಭಿನ್ನವಾಗಿದ್ದರೂ ಸಹ ಸತ್ಯವೇ ಆಗಿರುತ್ತದೆ, ಅಯಥಾರ್ಥವಾಗಿಲ್ಲ. ಆದ್ದರಿಂದ ಶಾಸ್ತ್ರಕ್ಕೆ ಅಯಥಾರ್ಥ ಪ್ರತಿಪಾದಕತ್ವವು ಅದರಿಂದಾದಂತಹ ಅನಾರಂಭಣೀ ಯತ್ವವು ಇಲ್ಲ ಎಂದು ಹೇಳುತ್ತೇನೆ ಎಂದು ಮಾಯಾವಾದಿಯು ಆಕ್ಷೇಪಿಸಿದರೆ ಆದಕ್ಕೆ ಉತ್ತರವನ್ನು ಹೇಳುತ್ತಾರೆ ಏನೆಂದರೆ ಹೀಗೆ ನೀನು ಬ್ರಹ್ಮನ ದೆಸೆಯಿಂದ ಭೇದವನ್ನು ಜೀವಬ್ರಹ್ಮೈಕ್ಯಕ್ಕೆ ಹೇಳಿ ಆ ಐಕ್ಯವು ಸತ್ಯ ಎಂದು ಹೇಳಿದರೆ ಬ್ರಹ್ಮವು ಒಂದು ಸತ್ಯ ಮತ್ತು ಬ್ರಹ್ಮನ ದೆಸೆಯಿಂದ ಭಿನ್ನವಾದ ಐಕ್ಯವು ಒಂದು ಸತ್ಯ ಎಂದು ಹೀಗೆ ಎರಡು ಸತ್ಯಪದಾರ್ಥಗಳನ್ನು ಸ್ವೀಕರಿಸಿದಂತಾಯಿತು. ಆಗ ಬ್ರಹ್ಮನು ಒಂದೇ ಸತ್ಯ; ಸತ್ಯವಾದ ಇನ್ನೊಂದು ಪದಾರ್ಥವಿಲ್ಲ ಎಂಬ ಅದ್ವೈತವನ್ನು ಶಾಸ್ತ್ರವು ಹೇಳುತ್ತದೆ ಎಂಬ ನಿನ್ನ ಅದ್ವೈತ ವಾದವನ್ನು ನೀನೆ ಪರಿತ್ಯಾಗ ಮಾಡಿದಂತಾಯಿತು ಎಂಬ ಅಭಿಪ್ರಾಯದಿಂದ ಶ್ರೀಮದಾಚಾರ್ಯರು ಅಪ್ಪಣೆ ಕೊಡುತ್ತಿದ್ದಾರೆ ಅದ್ವೈತಹಾನೇಃ ಎಂಬ ಗ್ರಂಥದಿಂದ—

**ಮೂಲ:-** "ಅದ್ವೈತಹಾನೇಃ ಸ್ವರೂಪಾತಿರೇಕೇ"

**ಭಾವಾರ್ಥ:-** ಹೀಗೆ ನೀನು ಶಾಸ್ತ್ರಕ್ಕೆ ಅನ್ಯಥಾ ಪ್ರತಿಪಾದಕತ್ವವನ್ನುಪರಿಹಾರ ಮಾಡುವುದಕ್ಕೋಸ್ಕರ ಐಕ್ಯವು ಬ್ರಹ್ಮ ಭಿನ್ನವಾಗಿ ಸತ್ಯ ಎಂದು ಹೇಳಿದರೆ ಬ್ರಹ್ಮವು ಒಂದು ಸತ್ಯ, ಐಕ್ಯವು ಒಂದು ಸತ್ಯ ಎಂದು ಎರಡು ಸತ್ಯಪದಾರ್ಥ ವನ್ನು ಹೇಳುತ್ತದೆ ಎಂಬ ಅದ್ವೈತ ವಾದವನ್ನು ಬಿಟ್ಟಂತಾಯಿತು.

**ಟೀಕಾ:-** ಬ್ರಹ್ಮಾತ್ಮೈಕ್ಯಸ್ಯೇತಿ ವರ್ತ್ಯತೆ । ಯಾಥಾರ್ಥ್ಯೇ ಸತೀತಿ ಶೇಷಃ । ಸ್ಯಾದೇತತ್ । ಐಕ್ಯಂ ಪರಮಾರ್ಥಸದೇವ । ಕಿಂ ತು ಬ್ರಹ್ಮಸ್ವರೂಪಾನತಿರಿಕ್ತಮೇವ । ಯಥಾಹ । ತಚ್ಚಾದ್ವೈತಂ ಬ್ರಹ್ಮೈವೇದಂ ಸರ್ವಮಿತಿ ಶ್ರುತ್ಯರ್ಥೇನ ಸಹೈಕ್ಯಮಾಪನ್ನ ಹಿ ಬ್ರಹ್ಮೈವ ಸ್ಯಾದಿತಿ । ತಥಾ ಚ ತತ್ಪ್ರತಿಪಾದಕಂ ಶಾಸ್ತ್ರಂ ಕಥಂ ಅಯಥಾರ್ಥಪ್ರತಿಪಾದಕಂ ಸ್ಯಾತ್ ಇತ್ಯತಃ ಆಹ—

**ಪ್ರತಿಪದಾರ್ಥ:-** ಬ್ರಹ್ಮಾತ್ಮೈಕ್ಯಸ್ಯ ಇತಿ=ಬ್ರಹ್ಮಾತ್ಮೈಕ್ಯಸ್ಯ ಎಂಬ ಶಬ್ದವು ವರ್ತತೆ=ಹಿಂದಿನ ಗ್ರಂಥದಲ್ಲಿ ಇರುವಂತಹುದೆ ಈ ಗ್ರಂಥದಲ್ಲಿರುತ್ತದೆ. ಅಂದರೆ ಬ್ರಹ್ಮಾತ್ಮೈಕ್ಯಸ್ಯ ಎಂಬ ಪದವನ್ನು ಇಲ್ಲಿ ಅನುವೃತ್ತಿ ಮಾಡಿಕೊಳ್ಳ ಬೇಕು. ಯಾಥಾರ್ಥ್ಯೇ ಸತೀತಿ=ಯಾಥಾರ್ಥ್ಯೇ ಸತಿ ಎಂಬ ಶಬ್ದವು, ಶೇಷಃ=ಅಧ್ಯಾಹಾರವಾಗಿರುತ್ತದೆ. ಏತತ್ ಐಕ್ಯಂ=ಈ ಐಕ್ಯವು, ಪರಮಾರ್ಥ ಸದೇವ=ಪರಮಾರ್ಥಿಕ ಸತ್ಯವೇ, ಸ್ಯಾತ್ ಆಗಿರಲಿ, ಕಿಂ ತು=ಸತ್ಯವಾದರೂ ಕೂಡ, ಬ್ರಹ್ಮಸ್ವರೂಪಾ ನತಿರಿಕ್ತಮೇವ=ಬ್ರಹ್ಮಸ್ವರೂಪದ ದೆಸೆಯಿಂದ, ಅಭಿನ್ನವೇ ಆಗಿರುತ್ತದೆ. ತಚ್ಚ=ಇದು ನಿಮಗೆ ಹೇಗೆ ಗೊತ್ತಾಯಿತು ಎಂದರೆ ಯಥಾಹ=ಹಾಗೇ ಹೇಳಿದ್ದರಿಂದ. ಅದ್ವೈತಂ=ಆ ಜೀವ ಬ್ರಹ್ಮೈಕ್ಯವು, ಬ್ರಹ್ಮೈವೇದಂ ಸರ್ವಂ=ಇದೆಲ್ಲವೂ ಪರಬ್ರಹ್ಮವೇ ಆಗಿರುತ್ತದೆ. ಅಂದರೆ ಬ್ರಹ್ಮನಿಗೂ ಈ ಎಲ್ಲ ಜಗತ್ತಿಗೂ ಅಭೇದವೇ ಇರುತ್ತದೆ ಎಂದು ಹೇಳುವ, ಶ್ರುತ್ಯರ್ಥೇನ=ಶ್ರುತ್ಯರ್ಥದಿಂದ, ಸಹ=ಕೂಡಿಕೊಂಡು, ಆಪನ್ನಂ= ಬಂದಂತಹ. ಐಕ್ಯಂ=ಜೀವಬ್ರಹ್ಮೈಕ್ಯ ಬ್ರಹ್ಮೈವಸ್ಯಾತ್=ಬ್ರಹ್ಮವೇ ಆಗಿರುತ್ತದೆ. ತಥಾಚ=ಹೀಗೆ ಅದು ಜೀವ ಬ್ರಹ್ಮೈಕ್ಯವೇ ಆಗಿರುವುದರಿಂದ, ತತ್ಪ್ರತಿಪಾದಕಂ ಶಾಸ್ತ್ರಂ=ಈ ಐಕ್ಯವನ್ನು ಹೇಳುವ ಶಾಸ್ತ್ರವು ಅಯಥಾರ್ಥಪ್ರತಿ ಪಾದಕವು, ಕಥಂ ಸ್ಯಾತ್=ಹೇಗೆ ಆಗುತ್ತದ. ಅಂದರೆ ಅಯಥಾರ್ಥ ಪ್ರತಿಪಾದಕವಾಗುವುದಿಲ್ಲ. ಇತ್ಯತಃ ಇಷ್ಟು ಪ್ರಶ್ನೆ ಬರುವುದರಿಂದ ಉತ್ತರವನ್ನು ಶ್ರೀಮದಾಚಾರ್ಯರು ಹೇಳುತ್ತಿದ್ದಾರೆ 'ಅನತಿರೇಕೆ' ಎಂಬ ಗ್ರಂಥದಿಂದ.

**ಭಾವಾರ್ಥ:—** ಈ ಜೀವ ಬ್ರಹ್ಮೈಕ್ಯವು ಬ್ರಹ್ಮನಿಂದ ಭಿನ್ನವಾಗಿದ್ದು ಪಾರಮಾರ್ಥಿಕ ಸತ್ಯವಾಗಿದೆ ಎಂದು ಹೇಳಿದರೆ ಆಗ ನೀವು ನಮಗೆ ಅದ್ವೈತಹಾನಿ ಎಂಬ ದೋಷವನ್ನು ಹೇಳುವಿರಲ್ಲವೆ. ನಾನು ಹಾಗೆ ಹೇಳುವುದಿಲ್ಲ. ನನ್ನ ಅಭಿಪ್ರಾಯವೇನೆಂದರೆ ಐಕ್ಯವು ಪಾರಮಾರ್ಥಿಕ ಸತ್ಯದಾಗಿದೆ. ಬ್ರಹ್ಮಸ್ವರೂಪದ ದೆಸೆಯಿಂದ ಅಭಿನ್ನವೇ ಆಗಿದೆ. ಆದ್ದರಿಂದ ಆತ್ಮ ಎಂದರೂ ಒಂದೆ, ಐಕ್ಯವೆಂದರೂ ಒಂದೇ ಎಂದಂತಾಯಿತು. ಆಗ ಸತ್ಯಪದಾರ್ಥ ಒಂದೇ ಆಯಿತು. ಎರಡು ಸತ್ಯಪದಾರ್ಥಗಳಾಗಿರಲಿಲ್ಲ, ಹೀಗಾಗಿ ಅದ್ವೈತಹಾನಿ ಎಂಬ ದೋಷವಿಲ್ಲ, ಮತ್ತು ಐಕ್ಯವು ಯಥಾರ್ಥವಾದ್ದರಿಂದ ಶಾಸ್ತ್ರಕ್ಕೆ ಯಥಾರ್ಥ ಪ್ರತಿಪದಕತ್ವವೇ ಬರುತ್ತದೆ ವಿನಃ ಅಯಥಾರ್ಥ ಪ್ರತಿಪಾದಕತ್ವವು ಇಲ್ಲ ಅದರಿಂದಾಗಿ ಅನಾರಂಭಣೀಯತ್ವವೂ ಇಲ್ಲ ಎಂದಾಗುತ್ತದೆ ಎಂದು ನನ್ನ ಅಭಿಪ್ರಾಯವಿದೆ: ಈ ಜೀವ ಬ್ರಹ್ಮೈಕ್ಯವು ಆತ್ಮನಿಂದ ಅಭಿನ್ನ ಎಂಬ ವಿಷಯದಲ್ಲಿ ಶ್ರುತಿಯು ಪ್ರಮಾಣವಾಗಿದೆ ಹೇಗಂದರೆ "ಬ್ರಹ್ಮೈವೇದಂ ಸರ್ವಂ" ಎಂಬ ಶ್ರುತಿಯು ಈ ಚೇತನಾಚೇತನಾತ್ಮಕವಾದ ಪ್ರಪಂಚಕ್ಕೆ ಮತ್ತು ಬ್ರಹ್ಮನಿಗೆ ಅಭೇದವನ್ನು ಹೇಳುತ್ತದೆ ಅಂದರೆ ಐಕ್ಯವು ಈ ಶ್ರುತಿಯಿಂದ ಸಿದ್ಧವಾಗುತ್ತದೆ. ಈ ಜೀವ ಬ್ರಹ್ಮೈಕ್ಯವು ಸಹ ಎಲ್ಲ ಪದಾರ್ಥದಲ್ಲಿ ಸೇರಿತು. ಅದೂ ಕೂಡ ಬ್ರಹ್ಮಸ್ವರೂಪವಾಗಿದೆ ಎಂಬುದು ಶ್ರುತಿಯಿಂದ ಸಿದ್ಧವಾಗಿದೆ. ಆದ್ದರಿಂದ ಸತ್ಯವಾದ ಐಕ್ಯಪ್ರತಿಪಾದಕತ್ವವು ಇರುವುದರಿಂದ ಶಾಸ್ತ್ರಕ್ಕೆ ಅನ್ಯಥಾ ಪ್ರತಿಪಾದಕತ್ವವೂ ಇಲ್ಲ ಅದರಿಂದ ಅನಾರಂಭಣೀಯತ್ವವೂ ಇಲ್ಲ ಮತ್ತು ಸತ್ಯಪದಾರ್ಥ ಒಂದೇ ಆದ್ದರಿಂದ ಅದ್ವೈತ ಹಾನಿ ಎಂಬ ದೋಷವಿಲ್ಲ.

**ಮೂಲ :** ಅನತಿರೇಕೇ ಸ್ವಪ್ರಕಾಶತ್ವಾದಾತ್ಮನಃ ಸಿದ್ಧಸಾಧನತಾ"

ಅನತಿರೇಕೇ=ಅಭೇದವು ಇದ್ದರೆ (ಐಕ್ಯಕ್ಕೆ ಬ್ರಹ್ಮಸ್ವರೂಪದ ದೆಸೆಯಿಂದ ಅಭೇದವು ಇದೆ ಎಂದು ಅಂಗೀಕಾರ ಮಾಡಿದರೆ), ಆತ್ಮನಃ=ಆತ್ಮನಿಗೆ ಸ್ವಪ್ರಕಾಶತ್ವಾತ್=ಸ್ವಪ್ರಕಾಶತ್ವವು ಇರುವುದರಿಂದ ಅಂದರೆ ಆತ್ಮಸ್ವರೂಪ ಜ್ಞಾನವು ಶಾಸ್ತ್ರವನ್ನು ಓದುವ ಮೊದಲೇ ಇರುವುದರಿಂದ (ಶಾಸ್ತ್ರಸ್ಯ = ಶಾಸ್ತ್ರಕ್ಕೆ ಇಲ್ಲಿ ಶಾಸ್ತ್ರಸ್ಯ ಎಂಬ ಶಬ್ದವು ಅಧ್ಯಾಹಾರವಾಗಿದೆ), ಸಿದ್ಧಸಾಧನತಾ= ಸಿದ್ಧಸಾಧನತಾ ಎಂಬ ದೋಷವು ಬರುತ್ತದೆ.

**ಅನತಿರೇಕೆ ಎಂಬ ಮೂಲದ ಭಾವಾರ್ಥ:—** ಆತ್ಮನು ಸ್ವಪ್ರಕಾಶನು. ಸ್ವಪ್ರಕಾಶನು ಎಂದರೆ ತನ್ನಿಂದ ಭಿನ್ನವಾದ ಪ್ರಮಾಣಾಂತರಗಳ ಅಪೇಕ್ಷೆಯಿಲ್ಲದೆ ಜ್ಞಾನ ವಿಷಯವಾಗುವುದು. ಅಂದರೆ ತನ್ನ ಜ್ಞಾನವನ್ನು ತಾನೇ ಮಾಡಿಕೊಳ್ಳುವುದು. ಹೀಗೆ ಸ್ವಪ್ರಕಾಶನಾದಂತಹ ಆತ್ಮನಿಂದ ಐಕ್ಯಕ್ಕೆ ಅಭೇದವನ್ನು ಹೇಳಿದರೆ ಐಕ್ಯವು ಸ್ವಪ್ರಕಾಶವಾಯಿತು, ಸ್ವಪ್ರಕಾಶವಾದ್ದರಿಂದ ಅದು ಸಿದ್ಧವೇ ಆಗಿರುತ್ತದೆ ಆತ್ಮನಂತೆ. ಹೀಗೆ ಸಿದ್ಧವಾಗಿರತಕ್ಕ ಐಕ್ಯವನ್ನೇ ಶಾಸ್ತ್ರವು ಹೇಳಿದರೆ ಶಾಸ್ತ್ರಕ್ಕೆ ಸಿದ್ಧಸಾಧನತಾ ಎಂಬ ದೋಷವು ಬರುತ್ತದೆ. ಸಿದ್ಧಸಾಧನತಾ ಬಂದರೆ ಬರಲಿ ಅದರಿಂದೇನು ಬಾಧಕ ಎಂದರೆ ಶಾಸ್ತ್ರಕ್ಕೆ ಪ್ರಯೋಜನವಿಲ್ಲ ಎಂದು ಆಗುತ್ತದೆ. ಏಕೆಂದರೆ ಶಬ್ದಪ್ರಯೋಗವನ್ನು ಮಾಡುವುದು ಒಂದು ಪ್ರವೃತ್ತಿಯನ್ನು ಹುಟ್ಟಿಸಲಿಕ್ಕೆ ಅಥವಾ ನಿವೃತ್ತಿಯನ್ನು ಹುಟ್ಟಿಸಲಿಕ್ಕೆ. ಸಿದ್ಧವಾದ ವಿಷಯವನ್ನು ಶಾಸ್ತ್ರವು ಹೇಳಿದರ, ಆ ವಿಷಯವು ಮೊದಲೆ ಸಿದ್ಧವಾಗಿರುವುದರಿಂದ ಶಾಸ್ತ್ರಾಭ್ಯಾಸದಲ್ಲಿ ನಮಗೆ ಪ್ರವೃತ್ತಿಯೇ ಹುಟ್ಟುವುದಿಲ್ಲ. ಆಗ ಶಾಸ್ತ್ರವು ವ್ಯರ್ಥವಾಗುವುದು, ಈ ಅಭಿಪ್ರಾಯವನ್ನೇ ಶ್ರೀಮಟ್ಟೀಕಾಕೃತ್ಪಾದರು 'ಯದಿ ಅದ್ವೈತಂ....' ಎಂಬ ಮುಂದಿನ ಗ್ರಂಥದಿಂದ ಹೇಳುತ್ತಿದ್ದಾರೆ.

**ಟೀಕಾ:—** ಶಾಸ್ತ್ರಸ್ಯೇತಿ ಶೇಷಃ । ಯದ್ಯದ್ವೈತಂ ಬ್ರಹ್ಮಸ್ವರೂಪಾನತಿರಿಕ್ತಂ ಸ್ಯಾತ್ ತದಾ ಶಾಸ್ತ್ರಸ್ಯ ಸಿದ್ಧಾರ್ಥಬೋಧಕತಾ ಪ್ರಸಜ್ಯೇತ । ಬೋಧ್ಯಸ್ಯಾತ್ಮನೋ ಬ್ರಹ್ಮಸ್ವರೂಪತ್ವಾತ್ ತಸ್ಯ ಚ ಸ್ವಪ್ರಕಾಶತ್ವೇನ ನಿತ್ಯಸಿದ್ಧತ್ವಾತ್ । ಅತಃ ಸಿದ್ಧಸಾಧನತಾಪರಿಹಾರಾಯ ಐಕ್ಯಸ್ಯ ಸ್ವರೂಪಾತಿರೇಕೇ ಅಂಗೀಕ್ರಿಯಮಾಣೇ ಅನ್ಯಥಾ ಪ್ರತಿಪಾದಕತ್ವಮೇವೇತಿ ।

**ಪ್ರತಿಪದಾರ್ಥ:-** ಶಾಸ್ತ್ರಸ್ಯೇತಿ=ಶಸ್ತ್ರಸ್ಯ ಎಂಬ ಶಬ್ದವು. ಶೇಷಃ=ಅಧ್ಯಾಹಾರವಾಗಿರುತ್ತದೆ. ಯದಿ=ಒಂದು ವೇಳೆ, ಅದ್ವೈತಂ=ಐಕ್ಯವು, ಬ್ರಹ್ಮಸ್ವರೂಪಾನತಿರಿಕ್ತಂಸ್ಯಾತ್=ಬ್ರಹ್ಮಸ್ವರೂಪದ ದೆಸೆಯಿಂದ ಅಭಿನ್ನವಾದರೆ. ತದಾ ಶಾಸ್ತ್ರಸ್ಯ=ಶಾಸ್ತ್ರಕ್ಕೆ, ಸಿದ್ಧಾರ್ಥಬೋಧಕತಾ=ಜ್ಞಾತವಾದಂತಹ ಅರ್ಥಪ್ರತಿಪಾದನೆ ಪ್ರಸಜ್ಯೇತ=ಪ್ರಸಕ್ತವಾಗಿರಬೇಕಾಗುತ್ತದೆ, (ಏಕೆಂದರೆ) ಬೋಧ್ಯಸ್ಯ=ಶ್ರುತಿಯಿಂದ ಹುಟ್ಟಿದ ಜ್ಞಾನವಿಷಯನಾದ, ಆತ್ಮನಃ=ಚೇತನನಿಗೆ. ಬ್ರಹ್ಮಸ್ವರೂಪತ್ವಾತ್=ಬ್ರಹ್ಮಸ್ವರೂಪವು ಇರುವುದರಿಂದ, ತಸ್ಯ ಚ=ಆ ಚೇತನನಿಗೆ, ಸ್ವಪ್ರಕಾಶತ್ವೇನ=ಸ್ವಪ್ರಕಾಶತ್ವ ಎಂಬ ಧರ್ಮವಿರುವುದರಿಂದ, ನಿತ್ಯಸಿದ್ಧತ್ವಾತ್=ಯಾವಾಗಲೂ ಜ್ಞಾನವಿಷಯತ್ವವೆ ಇರುವುದರಿಂದ. ಅತಃ ಆದ್ದರಿಂದ ಸಿದ್ಧಸಾಧನತಾ ಪರಿಹಾರಾಯ = ಸಿದ್ಧಸಾಧನತಾ ಎಂಬ ದೋಷಪರಿಹಾರ ಮಾಡುವುದಕ್ಕೋಸ್ಕರ. ಐಕ್ಯಸ್ಯ=ಐಕ್ಯಕ್ಕೆ, ಸ್ವರೂಪಾತಿರೇಕೆ=ಬ್ರಹ್ಮಸ್ವರೂಪದ ದೆಸೆಯಿಂದ ಬೇಧವು, ಅಂಗೀಕ್ರಿಯಮಾಣೇ ಸತಿ=ಅಂಗೀಕಾರ ವಿಷಯವಾಗುತ್ತಿರಲು, ಅನ್ಯಥಾ ಪ್ರತಿಪಾದಕತ್ವಮೇವ ಇತಿ = ಅನ್ಯಥಾ ಪ್ರತಿಪಾದಕತ್ವವೇ ಬರುತ್ತದೆ.

**ಭಾವಾರ್ಥ:-** ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುವುದಾದರೆ ಜೀವನು"ಮಾಂ ಅಹಂ ಜಾನಾಮಿ" ನನ್ನನ್ನು ನಾನು ತಿಳಿದುಕೊಂಡಿದ್ದೇನೆ ಎಂದು ಸಾಕ್ಷಿಗೆ ವಿಷಯನಾದ್ದರಿಂದ ಸ್ವಪ್ರಕಾಶನಾಗಿದ್ದಾನೆ. ಈ ಜೀವ ಎಂದರೂ ಒಂದೇ.

ಸಾಕ್ಷಿ ಎಂದರೂ ಒಂದೇ. ಪರಬ್ರಹ್ಮನೂ ಕೂಡ ಸ್ವಪ್ರಕಾಶನಾಗಿದ್ದಾನೆ. ಆದ್ದರಿಂದ ಸ್ವಪ್ರಕಾಶನಾದ ಆತ್ಮನಿಂದ ಅಭಿನ್ನವಾದ ಐಕ್ಯವೂ ಕೂಡ ಸ್ವಪ್ರಕಾಶವೇ ಆಯಿತು. ಸ್ವಪ್ರಕಾಶವಾದ್ದರಿಂದ ಐಕ್ಯವೂ ಸಹ ಜ್ಞಾತವೇ ಆಗಿರಬೇಕು ಆತ್ಮನಂತೆ. ಹೀಗೆ ಐಕ್ಯವೂ ಯಾವಾಗ ಜ್ಞಾತವಾಯಿತೋ ಆಂತಹ ಜ್ಞಾತವಾದ ಐಕ್ಯವನ್ನು ಪ್ರತಿಪಾದಿಸುವ ಶಾಸ್ತ್ರವು ಸಿದ್ಧ ಸಾಧನವಾಯಿತು. ಆದ್ದರಿಂದ ಶಾಸ್ತ್ರಕ್ಕೆ ಸಿದ್ಧಸಾಧನತಾ (ಜ್ಞಾತಸ್ಯೈವ ಜ್ಞಾಪಕತಾ) ಎಂಬ ದೋಷವು ಬರುತ್ತದೆ. ಹೀಗೆ ಸಿದ್ಧಸಾಧಕವಾದ ಶಾಸ್ತ್ರದಲ್ಲಿ ಪ್ರವೃತ್ತಿಯು ಹುಟ್ಟುವುದಿಲ್ಲವಾದ್ದರಿಂದ ಶಾಸ್ತ್ರಕ್ಕೆ ವೈಯರ್ಥ್ಯ ಎಂಬ ದೋಷವು ಬರುತ್ತದೆ. ಈ ದೋಷಗಳನ್ನು ಪರಿಹಾರ ಮಾಡಲು ಐಕ್ಯವು ಸ್ವಪ್ರಕಾಶವಲ್ಲ ಎಂದು ಹೇಳಬೇಕು. ಹಾಗೆ ಹೇಳಿದರೆ ಸ್ವಪ್ರಕಾಶನಾದಬ್ರಹ್ಮನಿಗೂ ಸ್ವಪ್ರಕಾಶವಾಗದೇ ಇರುವ ಐಕ್ಯಕ್ಕೂ ಭೇದವನ್ನು ಹೇಳಬೇಕು. ಹೀಗೆ ಐಕ್ಯವು ಬ್ರಹ್ಮಸ್ವರೂಪದೆಸೆಯಿಂದ ಭಿನ್ನವಾದ್ದರಿಂದ ಐಕ್ಯ ಮಿಥ್ಯಾವಾ.ಲೇಬೇಕು. ಏಕೆಂದರೆ ಬ್ರಹ್ಮ ಒಂದೇ ಸತ್ಯ ಎಂದು ಅವನ ಮತವಾದ್ದರಿಂದ. ಹೀಗೆ ಐಕ್ಯವು ಮಿಥ್ಯಾವಾಗಿರುವುತರಿಂದ ಮಿಥ್ಯಾಭೂತ ಐಕ್ಯಪ್ರತಿಪಾದಕತ್ವವು ಶಾಸ್ತ್ರಕ್ಕೆ ಬಂದು ಅದರಿಂದಾಗಿ ಅನಾಂರಂಭಣೀಯತ್ವವು ಶಾಸ್ತ್ರಕ್ಕೆ ಬರುತ್ತದೆ,

**ಟೀಕಾ:-** ಅಯಂ ಚ ದೋಷಃ ಸ್ವಮತಿರೀತ್ಯೈವೋಕ್ತ ಇತಿ ಮಂತವ್ಯಮ್ ಸ್ವ ವಿಷಯಪ್ರಕಾಶತ್ವಂ ಸ್ವಪ್ರಕಾಶತ್ವಮಿತಿ ಸ್ವಮತೆ ಅಂಗೀಕಾರಾತ್ । ಪರಮತರೀತ್ಯಾ ತು ಸ್ವಪ್ರಕಾಶತ್ವಾದಾತ್ಮನಃ ಶಸ್ತ್ರಸ್ಯ ಅಪ್ರತಿಪಾದಕತ್ವಂ ಸ್ಯಾತ್ । ಅವೇದ್ಯತ್ವಂ ಸ್ವಪ್ರಕಾಶತ್ವಮಿತ್ಯಂಗೀಕಾರಾತ್ । ಇತಿ ದೂಷಣಂ ದ್ರಷ್ಟವ್ಯಮ್ ।

**ಪ್ರತಿಪದಾರ್ಥ:-** ಅಯಂ ಚ ದೋಷಃ = ಈ ಸಿದ್ಧಸಾಧನತಾ ಎಂಬ ದೋಷವು, ಸ್ವಮತರೀತ್ಯೈವ = ತಮ್ಮ ಸಿದ್ಧಾಂತಕ್ಕೆ ಅನುಸರಿಸಿಯೇ, (ಶ್ರೀಮದಾಚಾರ್ಯರಿಂದ), ಉಕ್ತಃ = ಹೇಳಲ್ಪಟ್ಟಿದೆ, ಇತಿ = ಇಂತೆಂದು, ಮಂತವ್ಯಂ = ತಿಳಿಯತಕ್ಕದ್ದು (ಏಕೆಂವರೆ), ಸ್ವವಿಷಯಪ್ರಕಾಶತ್ವಂ = ತನ್ನ ವಿಷಯಕ ಜ್ಞಾನವನ್ನು ತಾನೆ ಮಾಡಿಕೊಡುವುದು, ಸ್ವಪ್ರಶಾಶತ್ವಂ = ಸ್ವಪ್ರಕಾಶತ್ವವು, ಇತಿ = ಇಂತೆಂದು ಸ್ವಮತೇ = ತಮ್ಮ ಸಿದ್ಧಾಂತದಲ್ಲಿ, ಅಂಗೀಕಾರಾತ್ = ಅಂಗೀಕರಿಸಿದ್ದರಿಂದ. ಪರಮತರೀತ್ಯಾ ತು = ಮಾಯಾವಾದ ಮತಕ್ಕನುಸರಿಸಿಯಾದರೋ (ಆತ್ಮನಿಗೆ) ಸ್ವಪ್ರಕಾಶತ್ವಾತ್ = ಸ್ವಪ್ರಕಾಶತ್ವವು ಇರುವುದರಿಂದ, ಶಾಸ್ತ್ರಸ್ಯ = ಶಾಸ್ತ್ರಕ್ಕೆ, ಅಪ್ರತಿಪಾದಕತ್ವ = ಪ್ರತಿಪಾದಕತ್ವಾಭಾವವು ಹೇಳದೇ ಇರುವಿಕೆಯು, ಸ್ಯಾತ್ = ಅಗಲಿ. (ಏಕೆಂದರೆ) ಅವೇದ್ಯತ್ವಂ = ಜ್ಞಾನಾವಿಷಯತ್ವವು, ಸ್ವಪ್ರಕಾಶತ್ವಂ = ಸ್ವಪ್ರಕಾಶತ್ವ ಶಬ್ದಾರ್ಥವು, ಇತಿ = ಇಂತೆಂದು, ದೂಷಣಂ = ದೂಷಣವು, ದೃಷ್ಟವ್ಯಂ = ಜ್ಞಾನ ವಿಷಯವಾಗಿದೆ (ತಿಳಿಯಬೇಕಾದಂತಹುದು).

**ಭಾವಾರ್ಥ:-** ಈ ರೀತಿಯಾಗಿ ಸ್ವಪ್ರಕಾಶತ್ವ ಎಂಬ ಶಬ್ದಕ್ಕೆ ಸ್ವವಿಷಯ ಪ್ರಕಾಶತ್ವ ಅಂದರೆ ತನ್ನ ಜ್ಞಾನವನ್ನು ತಾನೆ ಮಾಡಿಕೊಡುವುದು ಎಂಬ ಅರ್ಥವನ್ನು ಇಟ್ಟುಕೊಂಡು ಮಾಯಾವಾದಿ ಶಾಸ್ತ್ರಕ್ಕೆ ಅಥವಾ ವೇದಾದಿ ಶಾಸ್ತ್ರಕ್ಕೆ ಹೇಳಿದಂತಹ ಸಿದ್ಧಸಾಧನತಾ ದೋಷವನ್ನು ಶ್ರೀಮದಾಚಾರ್ಯರು ತಮ್ಮ ಸಿದ್ಧಾಂತಕ್ಕೆ ಅನುಸರಿಸಿ ಹೇಳಿದ್ದು ಎಂದು ತಿಳಿಯಬೇಕು. ಏಕೆಂದರೆ ಸ್ವಪ್ರಕಾಶತ್ವಂ ಎಂದರೆ ಸ್ವವಿಷಯಕ ಪ್ರಕಾಶತ್ವಂ ಎಂದು ಅರ್ಥವನ್ನು ಆಚಾರ್ಯರು ಅಂಗೀಕರಿಸುತ್ತಾರೆಯೇ ವಿನಃ ಮಾಯಾವಾದಿಯು ಆ ಅರ್ಥವನ್ನು ಅಂಗೀಕಾರ ಮಾಡುವುದಿಲ್ಲ. ಏಕೆಂದರೆ ಸ್ವವಿಷಯ ಪ್ರಕಾಶತ್ವ ಎಂಬ ಅರ್ಥವನ್ನು ಅಂಗೀಕಾರ ಮಾಡಬೇಕಾದರೆ ಪ್ರಕಾಶ = ಜ್ಞಾನ ಎಂಬ ಕ್ರಿಯೆಯಲ್ಲಿ ತಾನೇ ಕರ್ತಾ, ತಾನೇ ಕರ್ಮ ಎಂದು ಆಗಬೇಕು. ಸಾಮಾನ್ಯವಾಗಿ ಲೋಕದಲ್ಲಿ ಒಂದು ಕ್ರಿಯೆಯಲ್ಲಿ ಕರ್ತಾ ಮತ್ತು ಕರ್ಮ ಬೇರೆ ಬೇರೆಯಾಗುತ್ತದೆ. ಅಂದರೆ ಕರ್ತೃತ್ವ ಕರ್ಮತ್ವಗಳು ಏಕಾಧಿಕರಣಕವಾಗಿ ಇರುವುದಿಲ್ಲ. ಪ್ರಕೃತದಲ್ಲಿ ಅವುಗಳಿಗೆ ಏಕಾಧಿಕರಣತ್ವವನ್ನು ಹೇಳಿದರೆ ವಿರೋಧ ಬರುತ್ತದೆ. ಈ ವಿರೋಧವನ್ನು ಪರಿಹಾರ ಮಾಡಿ ಕರ್ತೃತ್ವ ಕರ್ಮತ್ವಗಳನ್ನು ಏಕತ್ರ ಹೇಳಬೇಕಾದರೆ ವಿಶೇಷ ಎಂಬ ಧರ್ಮವನ್ನು ಒಪ್ಪಬೇಕು. ಮಾಯಾವಾದಿಯು ಬ್ರಹ್ಮನಲ್ಲಿ

ಯಾವ ಧರ್ಮವು ಇಲ್ಲ ಎಂದು ಬ್ರಹ್ಮನಿಗೆ ನಿರ್ಧರ್ಮಕತ್ವವನ್ನು (ಯಾವ ಧರ್ಮವೂ ಇಲ್ಲ ಎಂದು) ಅಂಗೀಕರಿಸಿದ್ದಾನೆ. ಆದ್ದರಿಂದ ಮಾಯಾವಾದಿಗೆ ವಿಶೇಷ ಧರ್ಮವನ್ನು ಅಂಗೀಕರಿಸಲು ಬರುವುದೇ ಇಲ್ಲ. ಆದ್ದರಿಂದ ಕರ್ತೃತ್ವ ಕರ್ಮತ್ವಗಳನ್ನು ಏಕತ್ರ ಹೇಳಲು ಬರುವುದಿಲ್ಲ, ಹೀಗಾಗಿ ಸ್ವವಿಷಯಕ ಪ್ರಕಾಶತ್ವ ಸ್ವಪ್ರಕಾಶತ್ವಂ ಎಂದು ಅಂಗೀಕಾರ ಮಾಡಲು ಬರುವುದಿಲ್ಲ. ಆದ್ದರಿಂದ ಈ ಸಿದ್ಧಸಾಧನತಾ ದೋಷವು ಮಾಯವಾದಿ ಮತರೀತ್ಯಾ ಇಲ್ಲ. ಈ ದೋಷವು ದ್ವೈತಮತ ರೀತ್ಯಾ ಇದೆ ಎಂದು ಹೇಳುತ್ತಾರೆ.

ಹಾಗಾದರೆ ಮಾಯಾವಾದಿ ಮತರೀತ್ಯಾ ಏನು ದೋಷವೆಂದರೆ ಮಾಯಾವಾದಿಗಳು ಅವೇದ್ಯತ್ವ ಸ್ವಪ್ರಕಾಶತ್ವಂ ಎಂದು ಅಂಗೀಕರಿಸುತ್ತಾರೆ ಅಂದರೆ ಪ್ರಮಾಣಾಂತರಗಳಿಂದ ತಿಳಿಯಲ್ಪಡದೆ ಇರುವಂಥಾದ್ದು ಸ್ವಪ್ರಕಾಶವು ಎಂದು ಹೇಳಿದ್ದಾನೆ, ಅಂದರೆ ಸ್ವಪ್ರಕಾಶವಾದ ವಸ್ತುವನ್ನು ಪ್ರಮಾಣಗಳು ಹೇಳುವುದಿಲ್ಲ ಎಂದು ಅಂಗೀಕಾರ ಮಾಡಿದ್ದಾನೆ, ಹೀಗೆ ಅಂಗೀಕರಿಸಿದ್ದರಿಂದ ಪ್ರಕೃತ ವೇದಾದಿ ಶಾಸ್ತ್ರವಾಗಲಿ ಮಾಯಾವಾದಿಯ ಶಾಸ್ತ್ರವಾಗಲಿ ಐಕ್ಯವನ್ನು ಹೇಳಬಾರದು ಅಂದರೆ ಶಾಸ್ತ್ರಕ್ಕೆ ಅಪ್ರತಿಪಾದಕತ್ವ ಎಂಬ ದೋಷವು ಬರುತ್ತದೆ. ಅಪ್ರತಿಪಾದಕತ್ವವು ಬಂದರೆ ಬರಲಿ ; ಏನು ಬಾಧಕ ಎಂದರೆ ಶಾಸ್ತ್ರವು ಅಪ್ರತಿಪಾದಕವಾದರೆ ಅದಕ್ಕೆ ಯಾವ ವಿಷಯವೂ ಇಲ್ಲ ಎಂದಾಗುತ್ತದೆ. ಆಗ ವಿಷಯಾಭಾವಾತ್ ಅನಾರಂಭಣೀಯತ್ವವು ಮಾಯಾವಾದಿ ಶಾಸ್ತ್ರಕ್ಕೆ ಸಿದ್ಧವಾಗುತ್ತದೆ ಮತ್ತು ವೇದಾದಿ ಶಾಸ್ತ್ರಕ್ಕೆ ಆಪಾದ್ಯವಾಗುತ್ತದೆ ಎಂದು ತಿಳಿಯತಕ್ಕದ್ದು.

**ಟೀಕಾ:-** ನನು ಸ್ವಪ್ರಕಾಶತಯಾ ಆತ್ಮಸ್ವರೂಪಸ್ಯ ಸಿದ್ಧತ್ವೇಽಪ್ಯದ್ವೈತಾದಿ ವಿಶೇಷಾಕಾರೇಣಾನಧಿಗತತ್ವಾತ್ ನ ಶಾಸ್ತ್ರಸ್ಯ ಸಿದ್ಧಸಾಧನತ್ವಾದಿಕಮ್ । ಯಥಾ ಖಲು ಭವತಾಂ ಗುಣಗುಣಿನೋರಭೇದೇಽಪಿ ಗುಣಿನಃ ಸ್ಪರ್ಶನೇನೋಪಲಂಭೇ ರೂಪಸ್ಯಾನಧಿಗತಿರೇವಮಿತಿ । ಅತ ಆಹ—

**ಪ್ರತಿಪದಾರ್ಥ:** ನನು=ಪ್ರಶ್ನೆ, ಸ್ವಪ್ರಕಾಶತಯಾ=ಸ್ವಪ್ರಕಾಶತ್ವವು ಇರುವುದರಿಂದ, ಆತ್ಮಸ್ವರೂಪಸ್ಯ=ಆತ್ಮದ ಸ್ವರೂಪಕ್ಕೆ (ಕೇವಲ ಆತ್ಮ ಎನ್ನುವುದಕ್ಕೆ), ಸಿದ್ಧತ್ವೇಽಪಿ=ಜ್ಞಾನವಿಷಯತ್ವವು ಇದ್ದರೂ ಕೂಡ, ಅದ್ವೈತಾದಿ ವಿಶೇಷಾಕಾರೇಣಾನಧಿಗತತ್ವಾತ್=ಅದ್ವೈತ=ಜೀವಬ್ರಹ್ಮೈಕ್ಯವೇ, ಆದಿ ಮೊದಲಾಗಿವುಳ್ಳಂತಹ ವಿಶೇಷ=ವಿಶೇಷವಾದಂತಹ, ಆಕಾರೇಣ ಧರ್ಮದಿಂದ, ಅನಧಿಗತತ್ವಾತ್=ಜ್ಞಾನವಿಷಯತ್ವವಿಲ್ಲವಾದ್ದರಿಂದ, ಶಾಸ್ತ್ರಸ್ಯ=ಶಾಸ್ತ್ರಕ್ಕೆ ಸಿದ್ಧಸಾಧನತಾ=ಸಿದ್ಧಸಾಧನತಾ ಎಂಬ ದೋಷವು, ನ=ಇಲ್ಲ. ಯಥಾ=ಹೇಗೆ, ಭವತಾಂ=ನಿಮಗೆ (ದ್ವೈತಿಗಳಿಗೆ)ಃ ಗುಣಗುಣಿನೋಃ=ಗುಣ ಮತ್ತು ಗುಣಿಗಳಿಗೆ (ಧರ್ಮ ಮತ್ತು ಧರ್ಮಿಗಳಿಗೆ), ಅಭೇದೇಽಪಿ=ಅಭೇದವಿದ್ದರೂ ಕೂಡ. ಸ್ಪರ್ಶನೇನ=ತ್ವಗಿಂದ್ರಿಯದಿಂದ, ಗುಣಿನಃ=(ಗುಣವುಳ್ಳಂತಹ ಪದಾರ್ಥದ) ಧರ್ಮಿಯ, ಉಪಲಂಭೇಽಪಿ =ಜ್ಞಾನವಾದರೂ ಕೂಡ. ರೂಪಸ್ಯ=ರೂಪದ, ಅನಧಿಗತಿಃ = ಜ್ಞಾನಾಭಾವವು (ಸಪ್ರುತವಾಗಿದೆಯೋ), ಅದೇ ರೀತಿಯಲ್ಲಿ (ನಾನು ಕೂಡ ಹೇಳುತ್ತೇನೆ) ಇತ್ಯತಃ=ಹೀಗೆ (ಮಾಯಾವಾದಿಯು) ಪ್ರಶ್ನೆ ಮಾಡಿದರೆ ಅದಕ್ಕೆ ಉತ್ತರವನ್ನು ಶ್ರೀಮದಾಚಾರ್ಯರು, ಆಹ=ಹೇಳುತ್ತಾರೆ "ನಿರ್ವಿಶೇಷತ್ವಾದಾತ್ಮನೋ" ಎಂಬ ಗ್ರಂಥದಿಂದ.

**ಭಾವಾರ್ಥ:—** ಯದ್ಯಪಿ ಆತ್ಮ ಮತ್ತು ಐಕ್ಯಗಳಿಗೆ ಅಭೇದವು ಇರುತ್ತದೆ. ಇದ್ದರೂ ಸಹ ಆತ್ಮಜ್ಞಾನವಾದರೂ ಆತ್ಮಾಭಿನ್ನವಾದ ಐಕ್ಯದ ಜ್ಞಾನವು ಆಗುವುದಿಲ್ಲ. ಅದು ಹೇಗೆ ಎಂದರೆ ರೂಪ ಮತ್ತು ರೂಪಿಗೆ ಅಂದರೆ ರೂಪವಿರುವ ಪದಾರ್ಥಕ್ಕೆ ಅಭೇದವನ್ನು ನೀವು (ದ್ವೈತಿಗಳು) ಹೇಳುತ್ತೀರಿ. ಆದರೆ ತ್ವಗಿಂದ್ರಿಯದಿಂದ ರೂಪವುಳ್ಳಂತಹ ಪದಾರ್ಥ ಜ್ಞಾನವಾದರೂ ಆ ಪದಾರ್ಥದಲ್ಲಿರುವ ರೂಪ ಜ್ಞಾನವಾಗುವುದಿಲ್ಲ. ಇದು ಹೇಗೋ ಹಾಗೆಯೇ ನಾನೂ ಕೂಡ ಆತ್ಮಜ್ಞಾನವು ಸಾಕ್ಷಿಯಿಂದ (ತನ್ನಿಂದ) ಆಗಿದ್ದರೂ ಸಹ, ಆತ್ಮನಲ್ಲಿರುವ ಐಕ್ಯವೇ ಮೊದಲಾದ ವಿಶೇಷ

ಧರ್ಮಗಳ ಜ್ಞಾನವು ನಮಗೆ ಆಗುವುದಿಲ್ಲ, ಆದ್ದರಿಂದ ಐಕ್ಯವು ಸಿದ್ಧವಾಗುವುದಿಲ್ಲ. ಅಂತಹ ಐಕ್ಯವನ್ನು ತಿಳಿಸಿ ಕೊಡಲು ಶಾಸ್ತ್ರವು ಪ್ರವೃತ್ತವಾಗಿರುವುದರಿಂದ ಶಾಸ್ತ್ರಕ್ಕೆ ಸಿದ್ಧಸಾಧನತ್ವವು, ಆದರಿಂದಲೇ ಅನಾರಂಭಣೀಯತ್ವವು ಇಲ್ಲ ಎಂದು ಮಾಯಾವಾದಿಯು ಪ್ರಶ್ನೆಯನ್ನು ಮಾಡಿದರೆ ಆದಕ್ಕೆ ಶ್ರೀಮದಾಚಾರ್ಯರು ಉತ್ತರವನ್ನು ಹೇಳುತ್ತಾರೆ "ನಿರ್ವಿಶೇಷತ್ವಾದಾತ್ಮನೋ" ಎಂಬ ಗ್ರಂಥದಿಂದ.

**ಮೂಲ:—** " ನಿರ್ವಿಶೇಷತ್ವಾದಾತ್ಮನೋ ನಾನಧಿಗತೋ ವಿಶೇಷಃ "

**ಪ್ರತಿಪದಾರ್ಥ:—** ಆತ್ಮನಃ=ಆತ್ಮನಿಗೆ, ನಿರ್ವಿಶೇಷತ್ವಾತ್=ನಿರ್ಧರ್ಮಕತ್ವದ ದೆಸೆಯಿಂದ ಅಂದರೆ ನಿರ್ಧರ್ಮಕತ್ವ ವನ್ನು ಹೇಳಿದ್ದರಿಂದ, ವಿಶೇಷಃ=ಐಕ್ಯವೆಂಬ ವಿಶೇಷ ಧರ್ಮವು, ಅನಧಿಗತಃ=ಅಜ್ಞಾತವು, ನ=ಅಲ್ಲ.

**ಭಾವಾರ್ಥ:—** ಲೋಕದಲ್ಲಿ ಧರ್ಮಿಯಲ್ಲಿ ಧರ್ಮವನ್ನು ನಾವು ಒಪ್ಪುವುದರಿಂದ, ಧರ್ಮಜ್ಞಾನವಾದರೂ ಸಹ ಧರ್ಮಿಯಿಂದ ಅಭಿನ್ನವಾದ ಧರ್ಮದ ಜ್ಞಾನವಾಗಿಲ್ಲ ಎಂದು ಹೇಳಲು ನಮಗೆ ಅವಕಾಶವಿರುತ್ತದೆ. ಆದರೆ ಮಾಯಾವಾದಿ ಅದರಂತೆಯೇ ಬ್ರಹ್ಮನಲ್ಲಿ ಧರ್ಮವನ್ನು ಒಪ್ಪಿಲ್ಲವಾದ್ದರಿಂದ ಲೌಕಿಕ ದೃಷ್ಟಾಂತವನ್ನು ತೆಗೆದು ಕೊಂಡು ಬ್ರಹ್ಮನ ಜ್ಞಾನವಾದರೂ ಸಹ ಬ್ರಹ್ಮನಲ್ಲಿಯ ಐಕ್ಯಾದಿ ವಿಶೇಷ ಧರ್ಮಗಳ ಜ್ಞಾನವು ಆಗುವುದಿಲ್ಲ ಎಂದು ಹೇಳಲು ಮಾಯಾವಾದಿಗೆ ಬರುವುದಿಲ್ಲ. ಆದ್ದರಿಂದ ಐಕ್ಯದ ಜ್ಞಾನವು ಆಗಿದೆ ಎಂದು ಹೇಳಬೇಕು, ಯಾವಾಗ ಐಕ್ಯಾದಿ ವಿಶೇಷ ಧರ್ಮಗಳು ಸಿದ್ಧವಾಗಿವೆಯೋ ಆಗ ಶಾಸ್ತ್ರಕ್ಕೆ ಸಿದ್ಧ ಸಾಧನವು ಅಪರಿಹಾರವಾಯಿತು. ಧರ್ಮಿಯ ಜ್ಞಾನವಾದರೂ ಧರ್ಮಿಯಿಂದ ಅಭಿನ್ನವಾದ ಧರ್ಮವು ಜ್ಞಾತವಾಗುವುದಿಲ್ಲ ಎಂದು ಹೇಗೆ ಹೇಳುತ್ತೀರಿ, ಅಭೇದ ವಿದ್ದರೆ ಜ್ಞಾತವಾಗಬೇಕು ಎಂದು ಪ್ರಶ್ನೆ ಬರುತ್ತದೆ. ಉತ್ತರವೇನೆಂದರೆ ಯದ್ಯಪಿ ಧರ್ಮ ಮತ್ತು ಧರ್ಮಿಗಳಿಗೆ ಅಭೇದವನ್ನು ನಾವು ಹೇಳಿದರೂ ಆ ಧರ್ಮ ಧರ್ಮಿಗಳಿಗೆ ವಿಶೇಷ ಎಂಬ ಧರ್ಮವನ್ನು ಹೇಳುತ್ತೇವೆ ಅಂದರೆ ಧರ್ಮ ಧರ್ಮಿಗಳಿಗೆ ಸವಿಶೇಷಾಭೇದವನ್ನು ಹೇಳುತ್ತೇವೆ. ನಿರ್ವಿಶೇಷಾಭೇದ (ಅತ್ಯಂತ ಅಭೇದವನ್ನು) ನಾವು ಹೇಳುವು ದಿಲ್ಲ. ಆದ್ದರಿಂದ ಧರ್ಮಿ ಜ್ಞಾನವಾದರೂ ಸಹ ಆ ವಿಶೇಷದಬಲದಿಂದಾಗಿ ಧರ್ಮವು ಅಜ್ಞಾತವಾಗಲು ಅವಕಾಶ ವಿದೆ, ಹೀಗೆ ಮಾಯಾವಾದಿಯೂ ಸಹ ಐಕ್ಯವು ಆತ್ಮನಿಂದ ಅಭಿನ್ನವಾದರೂ ಅದು ಆತ್ಮನ ವಿಶೇಷ ಎಂದು ಹೇಳುವುದಿಲ್ಲ, ಏಕೆಂದರೆ ಆತ್ಮನಲ್ಲಿ ಯಾವ ವಿಶೇಷವನ್ನು ಒಪ್ಪುವುದಿಲ್ಲ, ಒಂದು ವೇಳೆ ಹಾಗೆ ಒಪ್ಪಿದ್ದರೆ ಆತ್ಮವು ಜ್ಞಾತವಾಗಿದ್ದರೂ ಆತ್ಮದ ವಿಶೇಷವಾದ ಐಕ್ಯವು ಜ್ಞಾತವಾಗಿಲ್ಲ ಎಂದು ಹೇಳಬಹುದಾಗಿತ್ತು. ಆದರೆ ಆತ್ಮನಿಗೆ ನಿರ್ಧರ್ಮಕತ್ವವನ್ನು ಅಂಗೀಕಾರ ಮಾಡಿದ್ದರಿಂದ ಮಾಯಾವಾದಿಗೆ ಆತ್ಮಜ್ಞಾನವಾದರೂ ಐಕ್ಯಜ್ಞಾನವಾಗಿಲ್ಲ ಎಂದು ಹೇಳಲು ಬರುವುದಿಲ್ಲ.

ಹೀಗೆ ಮೇಲೆ ಹೇಳಿದ ಇಷ್ಟು ಅಭಿಪ್ರಾಯದಿಂದ ಶ್ರೀಮಟ್ಟೀಕಾಕೃತ್ಪಾದರು ವ್ಯಾಖ್ಯಾನವನ್ನು ಮಾಡುತ್ತಿದ್ದಾರೆ "ಸ್ಯಾದೇವಂ" ಎಂಬ ಗ್ರಂಥದಿಂದ—

**ಟೀಕಾ:-** ಸ್ಯಾದೇವಂ ಪಟೋಬಲಂಭೇಽಪಿ ತದ್ರೂಪಾನುಪಲಬ್ಧಿಃ ಯತಃ ರೂಪಂ ಪಟಾಭಿನ್ನಮಪಿ ತದ್ವಿಶೇಷತಯಾ ಅಂಗೀಕ್ರಿಯತೇ। ನ ತು ತನ್ಮಾತ್ರಮ್ । ನ ಚೈಕ್ಯಮಪಿ ಆತ್ಮಾಭಿನ್ನಂ ತದ್ವಿಶೇಷಃ ಯೇನ ಆತ್ಮನಿ ಸಿದ್ಧೇಽಪ್ಯನಧಿಗತಮಿತಿ ಯುಕ್ತಮ್ । ಆತ್ಮಸ್ವರೂಪಸ್ಯ ನಿರ್ವಿಶೇಷತಾಂಗೀಕಾರಾತ್ ।

**ಪ್ರತಿಪದಾರ್ಥ:—** ಏವಂ=ನೀನು ಹೇಳಿದಂತೆ ಪಟೋಬಲಂಭೇಽಪಿ=ಪಟದ ಜ್ಞಾನವಾದರೂ, ತದ್ರೂಪಾನು ಪಲಬ್ಧಿಃ=ಪಟದಲ್ಲಿರುವ ರೂಪದ ಜ್ಞಾನಾಭಾವವು (ಜ್ಞಾನವು ಆಗದೇ ಇರುವುದು), ಸ್ಯಾತ್=ಆಗಲಿ, ಯತಃ

=ಇರುವ ಕಾರಣದ ದೆಸೆಯಿಂದ, ರೂಪಂ=ರೂಪವು, ಪಟಾಭಿನ್ನಮಪಿ=ಪಟದ ದೆಸೆಯಿಂದ, ಅಭಿನ್ನವಾಗಿದ್ದರೂ ಕೂಡ ತದ್ವಿಶೇಷತಯಾ=ಭೇದ ಪ್ರತಿನಿಧಿಯಾದ ವಿಶೇಷಕ್ಕೆ ಆಶ್ರಯವಾದದ್ದನ್ನಾಗಿ, ಅಂಗೀಕ್ರಿಯತೇ=ಅಂಗೀಕಾರ ಮಾಡಲ್ಪಡುತ್ತದೆ. ತನ್ಮಾತ್ರಂ=ಅದರ ಸ್ವರೂಪವೇ ಎಂದು, ನ ತು=ಅಲ್ಲವೇ ಅಲ್ಲ, ಐಕ್ಯಮಪಿ=ಐಕ್ಯವೂ ಕೂಡ. ಆತ್ಮಾಭಿನ್ನಂ=ಆತ್ಮನಿಂದ ಅಭಿನ್ನವಾಗಿ, ತದ್ವಿಶೇಷಃ=ಆತ್ಮನಲ್ಲಿರುವ ವಿಶೇಷ ಧರ್ಮ ಎಂದು, ನ ಚ= ಇಲ್ಲ. ಯೇನ=ಒಂದು ವೇಳೆ ಹಾಗೆ ಇದ್ದರೆ, ಆತ್ಮನಿ ಸಿದ್ಧೇಪಿ=ಆತ್ಮನು ಜ್ಞಾತನಾಗಿರಲೂ ಕೂಡ, ಅನಧಿಗತಃ =ವಿಶೇಷವು ತಿಳಿಯಲ್ಪಡುವುದಿಲ್ಲ, ಇತಿ ಯುಕ್ತಮ್=ಹೀಗೆ ಹೇಳಲವು ಯುಕ್ತವಾಗುತ್ತಿತ್ತು. (ನಿನಗೆ ಹಾಗೆ ಹೇಳಲು ಬರುವುದಿಲ್ಲ. ಏಕೆಂದರೆ), ಆತ್ಮಸ್ವರೂಪಸ್ಯ=ಆತ್ಮಸ್ವರೂಪಕ್ಕೆ. ನಿರ್ವಿಶೇಷತಾಂಗೀಕಾರಾತ್=ನಿರ್ಧರ್ಮ ಕತ್ವವನ್ನು ಅಂಗೀಕರಿಸಿದ್ದರಿಂದ ಇತಿ=ಇಂತೆಂಬ ಭಾವವು.

**ಭಾವಾರ್ಥ:–** ಪಟದಲ್ಲಿ ರೂಪಾದಿ ಧರ್ಮಗಳ ಅಂಗೀಕಾರವನ್ನು ಮಾಡಿದ್ದೇವೆ, ಆ ಪಟಕ್ಕೂ ರೂಪಕ್ಕೂ ಅಭೇದವಿದ್ದರೂ ಕೂಡ ಪಟದ ಜ್ಞಾನವಾದರೂ ರೂಪಜ್ಞಾನವಾಗದೇ ಇರುವುದು ನಮ್ಮ ಸಿದ್ಧಾಂತದಲ್ಲಿ ಸರಿಯಾಗುತ್ತದೆ. ಏಕೆಂದರೆ ಪಟ ಮತ್ತು ರೂಪಗಳಿಗೆ ಅಭೇದವನ್ನು ಹೇಳಿದ್ದರೂ ಸಹ ರೂಪವು ಪಟದ ಸ್ವರೂಪ ಅಂದರೆ ರೂಪವೇ ಪಟ, ಪಟವೇ ರೂಪ ಎಂದು ಹೇಳುವುದಿಲ್ಲ; ಮತ್ತು ರೂಪವು ಪಟದ ಒಂದು ವಿಶೇಷ ಎಂದು ಹೇಳುತ್ತೇವೆ. ಅದರಂತೆಯೇ ನೀನೂ ಕೂಡ ಐಕ್ಯವು ಆತ್ಮನಿಂದ ಅಭಿನ್ನವಾಗಿದ್ದರೂ ಸಹ ಆ ಐಕ್ಯವು ಆತ್ಮನ ಒಂದು ವಿಶೇಷ ಎಂದು ಹೇಳಿಲ್ಲ. ಐಕ್ಯವೇ ಆತ್ಮ ಎಂದು ಹೇಳುತ್ತೀಯೇ, ಹೀಗಿರುವಾಗ ಆತ್ಮನಲ್ಲಿ ಯಾವ ಧರ್ಮವೂ ಇಲ್ಲದಿರುವಾಗ ಮತ್ತು ಆತ್ಮನು ಸ್ವಪ್ರಕಾಶನಾದ್ದರಿಂದ ಐಕ್ಯವೂ ಸ್ವಪ್ರಕಾಶವಾಗಬೇಕಾಗುತ್ತದೆ. ಆತ್ಮ ಜ್ಞಾನವಾದರೆ ಐಕ್ಯ ಜ್ಞಾನವಾಗಲೇಬೇಕು, ಐಕ್ಯವು ಜ್ಞಾತವಾದರೆ ಅಂತಹ ಸಿದ್ಧವಾದ ಐಕ್ಯವನ್ನು ಹೇಳುವ ಶಾಸ್ತ್ರಕ್ಕೆ ಸಿದ್ಧಸಾಧನತಾ ಎಂಬ ದೋಷವು ಬರುತ್ತದೆ. ಆದ್ದರಿಂದಲೇ ಅನಾರಂಭಣೀಯತ್ವವೂ ಬರುತ್ತದೆ.

**ಅವತಾರಿಕಾ:–** ಮೇಲೆ ಹೇಳಿದಂತೆ ಸಿದ್ಧಸಾಧನತ್ವವನ್ನು ನಾವು ಹೇಳಿದರೆ ಮಾಯಾವಾದಿಯು ಅದನ್ನು ಪರಿಹಾರ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ 'ಅಥಾಪಿಸ್ಯಾತ್' ಎಂಬ ಗ್ರಂಥದಿಂದ—

**ಟೀಕಾ:–** ಅಥಾಪಿ ಸ್ಯಾತ್ । ಭವೇದಿದಂ ಶಾಸ್ತ್ರಸ್ಯ ಸಿದ್ಧಸಾಧನತ್ವಾದಿ ಯದಿ ಶಾಸ್ತ್ರಂ ಸಾಕ್ಷಾದದ್ವೈತಂ ಪ್ರತಿಪಾದಯತೀತಿ ಬ್ರೂಮಃ । ನ ಚೈವಂ । ಕಿಂ ನಾಮ ? ಆವರಣಭೂತಾಜ್ಞಾನಮಾತ್ರಂ ನಿವರ್ತಯತೀತಿ। ನಿವೃತ್ತೇತ್ವಾವರಣೇ ಅದ್ವೈತಂ ಸ್ವತ ಏವ ಸಿದ್ಧಮ್ । ತದುಕ್ತಂ 'ಸಿದ್ಧಂ ತು ನಿವರ್ತಕತ್ವಾತ್' ಇತಿ । ತತ್ರಾಹ—

**ಪ್ರತಿಪದಾರ್ಥ:-** ಅಥಾಪಿ=ಈ ಮುಂದೆ ಹೇಳುವ ಸಿದ್ಧಸಾಧನತಾದ ಪರಿಹಾರ ಯುಕ್ತಿಯು, ಸ್ಯಾತ್=ಇರಲಿ (ಅದೇನೆಂದರೆ) ಶಾಸ್ತ್ರಸ್ಯ=ಶಾಸ್ತ್ರಕ್ಕೆ ಇದಂ=ನೀವು ಹೇಳಿದಂತಹ. ಸಿದ್ಧಸಾಧನತ್ವಾದಿ=ಸಿದ್ಧಸಾಧನತ್ವವು, ಇಲ್ಲಿ ಆದಿಪದದಿಂದ ಅನಾರಂಭಣೀಯತ್ವವು, ಭವೇತ್=ಆಗಲಿ. ಯದಿ=ಒಂದು ವೇಳೆ, ಶಾಸ್ತ್ರಂ=ಶಾಸ್ತ್ರವು. ಸಾಕ್ಷಾತ್ =ಮುಖ್ಯವಾಗಿ, ಅದ್ವೈತಂ = ಐಕ್ಯವನ್ನು ಪ್ರತಿಪಾದಯತೀತಿ = ಹೇಳುತ್ತದೆ ಎಂದು. ಬ್ರೂಮಃ = ನಾವು (ಮಾಯಾವಾದಿಗಳು) ಹೇಳಿದ್ದರೆ. ನ ಚೈವಮ್=ನಾವು ಹೀಗೆ ಹೇಳುವುದಿಲ್ಲ. ಕಿಂ ನಾಮ=ಹಾಗಾದರೆ ಏನು ಹೇಳುತ್ತೇವೆ ಎಂದರೆ, ಆವರಣಭೂತ ಅಜ್ಞಾನ ಮಾತ್ರಂ=ಐಕ್ಯಕ್ಕೆ ಆವರಣವಾದಂತಹ ಅಜ್ಞಾನವನ್ನು ಮಾತ್ರ ನಿವರ್ತಯತಿ=(ಶಾಸ್ತ್ರವು) ನಾಶ ಮಾಡುತ್ತದೆ, ಇತಿ ಬ್ರೂಮಃ=ಹೀಗೆ ಹೇಳುತ್ತೇವೆ. ಆವರಣೇ ನಿವೃತ್ತೇ ಸತಿ =ಆವರಣವು ನಾಶವಾಗುತ್ತಿರಲು, ಅದ್ವೈತಂ=ಐಕ್ಯವು, ಸ್ವತ ಏವ=ಶಾಸ್ತ್ರಾದಿ ಪ್ರಮಾಣಗಳ ಅಪೇಕ್ಷೆಯು ಇಲ್ಲದೆ ತಾನಾಗಿಯೇ, ಸಿದ್ಧಂ=ಸಿದ್ಧವಾಗುತ್ತದೆ. ತತ್=ಅಜ್ಞಾನ ನಿವೃತ್ತಿಯು ಶಾಸ್ತ್ರದಿಂದ ಆಗುತ್ತದೆ, ಶಾಸ್ತ್ರವು

ಐಕ್ಯವನ್ನು, ಹೇಳದಿದ್ದರೂ ಪ್ರಯೋಜನವು ನಿವರ್ತಕತ್ವಾತ್=(ಶಾಸ್ತ್ರಕ್ಕೆ) ಅಜ್ಞಾನನಿವರ್ತಕತ್ವವು ಇರುವುದರಿಂದ, ಸಿದ್ಧಂತು=ಸಿದ್ಧವಾಯಿತು. ಇತಿ = ಈ ವಾಕ್ಯದಿಂದ, ಉಕ್ತಂ = ವಿವರಣಕಾರನಿಂದ) ಹೇಳಲ್ಪಟ್ಟಿದೆ. ತತ್ರ = ಆವಿಷಯದಲ್ಲಿ, ಆಹ = ಶ್ರೀಮದಾಚಾರ್ಯರು ಹೇಳಿದ್ದಾರೆ "ಸಿದ್ಧತ್ವಾತ್ಸ್ವರೂಪಸ್ಯ" ಎಂಬ ಮುಂದಿನ ಗ್ರಂಥದಿಂದ—

**ಭಾವಾರ್ಥ:—** ಐಕ್ಯವು ಸ್ವಪ್ರಕಾಶವಾದ್ದರಿಂದ ಶಾಸ್ತ್ರವು ಅಂತಹ ಐಕ್ಯವನ್ನು ಪ್ರತಿಪಾದಿಸಿದರೆ ಸಿದ್ಧಸಾಧನತಾ ಬರುತ್ತವೆ ಎಂದು ಹೇಳುತ್ತೀರಲ್ಲವೇ. ನಾನು ನೀವು ಹೇಳಿದಂತೆ ಹೇಳುವುದಿಲ್ಲ. ನನ್ನ ಅಭಿಪ್ರಾಯವೇನೆಂದರೆ ಶಾಸ್ತ್ರವು ಅದ್ವೈತವನ್ನು ಪ್ರತಿಪಾದಿಸುವುದಿಲ್ಲ, ಒಂದು ವೇಳೆ ಅದ್ವೈತ ಪ್ರತಿಪಾದನೆ ಮಾಡಿದ್ದರೆ ಸಿದ್ಧಸಾಧನತಾ ಬರುತ್ತದೆ. ಹಾಗಾದರೆ ಶಾಸ್ತ್ರವು ಏನು ಮಾಡುತ್ತದೆ ಎಂದರೆ ಐಕ್ಯಕ್ಕೆ ಆವರ್ಕವಾದ ಅಜ್ಞಾನವನ್ನು ಪರಿಹಾರ ಮಾಡುತ್ತದೆ. ಆ ಅಜ್ಞಾನವು ನಾಶವಾದರೆ ನಂತರ ಐಕ್ಯವು (ಸ್ವಪ್ರಕಾಶವಾದ್ದರಿಂದ) ತಾನೆ ಸಿದ್ಧವಾಗುತ್ತದೆ. ಹೇಗೆಂದರೆ ಒಂದು ದೀಪದ ಮೇಲೆ ಮುಚ್ಚಲವನ್ನು ಮುಚ್ಚಿದಾಗ ದೀಪವು ಸ್ವಪ್ರಕಾಶವಾದರೂ ಕೂಡ ದೀಪದ ಜ್ಞಾನವು ಆಗುವುದಿಲ್ಲ. ಆ ದೀಪಕ್ಕೆ ಆವರ್ಕವಾದ ಮುಚ್ಚಲವನ್ನು ತೆಗೆದರೆ ದೀಪವು ತನ್ನಷ್ಟಕ್ಕೆ ತಾನೇ ತಿಳಿಯಲ್ಪಡುತ್ತದೆ, ಅದರಂತೆಯೇ ಅಜ್ಞಾನವೆಂಬ ಆವರ್ಕವು ಹೋದರೆ ಐಕ್ಯವು ಸ್ವತಃ ಸಿದ್ಧವಾಗುತ್ತದೆ, ಈ ಅಜ್ಞಾನದ ನಾಶವನ್ನು ಶಾಸ್ತ್ರವು ಮಾಡುತ್ತದೆ. ಆದ್ದರಿಂದ ಐಕ್ಯಕ್ಕೆ ಆವರ್ಕವಾದ ಅಜ್ಞಾನ ನಿವೃತ್ತಿ ಎನ್ನುವುದು ಶಾಸ್ತ್ರಕೆ ಪ್ರಯೋಜನವೇ ಹೊರತು ಐಕ್ಯವಿಷಯಕ ಜ್ಞಾನವು ಶಾಸ್ತ್ರಕ್ಕೆ ಪ್ರಯೋಜನವಲ್ಲ. ಆದ್ದರಿಂದ ಐಕ್ಯಪ್ರತಿಪಾದಕತ್ವವು ಶಾಸ್ತ್ರಕ್ಕೆ ಇಲ್ಲ. ಆದ್ದರಿಂದ ಸಿದ್ಧಸಾಧನತಾ ಶಾಸ್ತ್ರಕ್ಕೆ ಇಲ್ಲ. ಅಜ್ಞಾನದ ನಿವೃತ್ತಿಯೇ ಶಾಸ್ತ್ರಕ್ಕೆ ಪ್ರಯೋಜನ ಎಂದು.

ಹೀಗೆ ಮೇಲೆ ಹೇಳಿದಂತೆ ಸಿದ್ಧಸಾಧನತ್ವವನ್ನು ಮಾಯಾವಾದಿಯು ಪರಿಹಾರವನ್ನು ಮಾಡಿಕೊಂಡರೆ ಅದಕ್ಕೆ ಶ್ರೀಮದಾಚಾರ್ಯರು ಹೇಳುತ್ತಾರೆ—

[**ಮೂಲ :—** "ಸಿದ್ಧತ್ವಾತ್ಸ್ವರೂಪಸ್ಯ ವಿಶೇಷಾಭಾವಾಚ್ಚನಾಜ್ಞಾನಂ ಕಸ್ಯಚಿದಾವರಕಮ್ ।"]
**ಪ್ರತಿಪದಾರ್ಥ :—** ಸ್ವರೂಪಸ್ಯ=ಆತ್ಮಸ್ವರೂಪಕ್ಕೆ, ಸಿದ್ಧತ್ವಾತ್=ಜ್ಞಾನವಿಷಯತ್ವವಿರುವುದರಿಂದ, ಚ=ಮತ್ತು, ವಿಶೇಷಾಭಾವಾತ್ (ಆತ್ಮನಲ್ಲಿ) ಯಾವ ಧರ್ಮವು ಇಲ್ಲವಾದ್ದರಿಂದ, ಅಜ್ಞಾನಂ = ಅಜ್ಞಾನವು, ಕಸ್ಯಚಿತ್ = ಯಾವುದಕ್ಕೆ ಆಗಲಿ (ಆತ್ಮಕ್ಕೆ ಆಗಲಿ ಅಥವಾ ಆತ್ಮಧರ್ಮಕ್ಕೆ ಆಗಲಿ), ಆವರಕಂ=ಆವರಕವು, ನ=ಅಲ್ಲ,

**ಭಾವಾರ್ಥ :—** ಪ್ರತಿಯೊಬ್ಬ ಆತ್ಮನಿಗೂ "ಅಹಮಹಂ" ಎಂಬ ಅನುಸಂಧಾನ ಬರುತ್ತದೆ. ತನ್ನ ಜ್ಞಾನ ತಾನು ಸಂಪಾದಿಸಲು ಪ್ರಮಾಣಾಪೇಕ್ಷೆ ಇಲ್ಲವಾದ್ದರಿಂದ ಅದು ಸ್ವಪ್ರಕಾಶವು, ಆದ್ದರಿಂದ ಅದಕ್ಕೆ ಅಜ್ಞಾನವು ಆವರ್ಕವಾಗುವುದಿಲ್ಲ. ಇನ್ನು ಆತ್ಮನಲ್ಲಿರುವ ಧರ್ಮಕ್ಕೆ ಅಜ್ಞಾನವು ಆವರಕವಾಗುತ್ತದೆ ಎಂಬ ಪಕ್ಷವು ಸರಿಯಿಲ್ಲ. ಏಕೆಂದರೆ ಆತ್ಮನಲ್ಲಿ ಯಾವ ಧರ್ಮವೂ ಇಲ್ಲ ಎಂದು ನೀನೇ (ಮಾಯಾವಾದಿಯೇ) ಒಪ್ಪಿದ್ದರಿಂದ ಅದಕ್ಕೆ ಹೇಗೆ ಆವರ್ಕವಾದೀತು ?

**ಅವತಾರಿಕಾ :—** ಹೀಗೆ ಅಜ್ಞಾನವೆಂಬ ಆವರಕವು ಆಗುವುದಿಲ್ಲ. ಇದರಿಂದ ಆಚಾರ್ಯರು ಏನು ಹೇಳಿದಂತಾಯಿತು ಎಂದರೆ ಶ್ರೀಮಟ್ಟೀಕಾಕೃತ್ಪಾದರು ವಿವರಿಸುತ್ತಿದ್ದಾರೆ ಸ್ಯಾದೇವಂ ಎಂಬ ಮುಂದಿನ ಗ್ರಂಥದಿಂದ—
**ಟೀಕಾ :—** ಸ್ಯಾದೇವಂ ಶಾಸ್ತ್ರಸ್ಯ ಸಿದ್ಧಸಾಧನತ್ವಾದಿ ಪರಿಹಾರಃ । ಯದಿ ಪರಮತೆ ಅಜ್ಞಾನಮಾವರಣಂ ಸಂಭವೇತ್ । ನ ಚೈತತ್ಸಂಭವತಿ । ಆವರಣಂ ಅವ್ರಿಯಮಾಣೇನ ವ್ಯಾಪ್ತಮ್ । ನ ಚಾಜ್ಞಾನಸ್ಯ ತದಸ್ತಿ । ತಥಾಹಿ । ಕಿ ಮಜ್ಞಾನಮ್ ಆತ್ಮಸ್ವರೂಪಸ್ಯ ಆವರಣಂ ಸ್ಯಾತ್ ? ಉತ ತದ್ವಿಶೇಷಸ್ಯ ? ನಾದ್ಯಃ । ತಸ್ಯ ಸ್ವಪ್ರಕಾಶತ್ವೇನ

ನಿತ್ಯಸಿದ್ಧತ್ವಾತ್ । ನ ದ್ವಿತೀಯಃ । ತದಭಾವಾತ್ ತಥಾಚ ವ್ಯಾಪಕಾಭಾವಾತ್ ವ್ಯಾಪ್ಯಮಾವರಣಮಪಿ ನ ಸಂಭವತೀತಿ ನ ತನ್ನಿವರ್ತಕತ್ವೇನ ಶಾಸ್ತ್ರಸ್ಯ ಅಸಿದ್ಧಸಾಧನತ್ವಂ ಭವತೀತಿ ।

**ಪ್ರತಿಪದಾರ್ಥ :—** ಯದಿ=ಒಂದು ವೇಳೆ. ಪರಮತೇ=ಅದ್ವೈತ ಮತದಲ್ಲಿ ಅಜ್ಞಾನಂ=ಅಜ್ಞಾನವು, ಆವರಣಂ ಸತ್)=ಆವರಣವಾಗಿ, ಸಂಭವೇತ್=ಸಂಭವಿಸಿದರೆ. ಏವಂ = ಈ ರೀತಿಯಾಗಿ, ಶಾಸ್ತ್ರಸ್ಯ=ಶಾಸ್ತ್ರಕ್ಕೆ ಸಿದ್ಧ ಸಾಧನತ್ವಾದಿ ಪರಿಹಾರಃ=ಸಿದ್ಧಸಾಧನತ್ವಾದಿ ಪರಿಹಾರವು, ಸ್ಯಾತ್=ಆಗಲಿ, ಏತತ್=ಈ ಅಜ್ಞಾನಕ್ಕೆ ಆವರಕವು ನ ಚ ಸಂಭವತಿ=ಕೂಡುವುದಿಲ್ಲ (ಏಕೆಂದರೆ) ಆವರಣಂ=ಆವರ್ಕವಾದ ಪದಾರ್ಥವು, ಆವ್ರಿಯಮಾಣೇನ = ಆವೃತವಾದ ಪದಾರ್ಥದಿಂದ, ವ್ಯಾಪ್ತಂ=ವ್ಯಾಪ್ತವಾಗಿದೆ, ಹಿ=ನಿಶ್ಚಯವು. ಅಜ್ಞಾನಸ್ಯ=ಅಜ್ಞಾನವೆಂಬ ಆವರಕಕ್ಕೆ, ತತ್=ಆ ಆವೃತವಾದ ಪದಾರ್ಥವು, ನ ಚಾಸ್ತಿ=ಇರುವುದಿಲ್ಲ, ತಥಾಹಿ=ಅದು ಹೇಗೆಂದರೆಃ ಅಜ್ಞಾನಂ=ಅಜ್ಞಾನವು ಆತ್ಮಸ್ವರೂಪಸ್ಯ = ಆತ್ಮಸ್ವರೂಪಕ್ಕೆ ಆವರಣಂ ಸ್ಯಾತ್ ಕಿಂ ?=ಆವರಣವಾಗಿದೆ ಏನು ? ಉತ=ಅಥವಾ, ತತ್=ಆ ಆತ್ಮನ, ವಿಶೇಷಸ್ಯ=ವಿಶೇಷಕ್ಕೆ, ಆವರಣಂ ಸ್ಯಾತ್ ಕಿಂ ? = ಆವರಣವಾಗುತ್ತದೆಯೋ ? ಆದ್ಯಃ = ಆತ್ಮಸ್ವರೂಪಕ್ಕೆ ಆವರಣ ಎಂಬ ಪಕ್ಷವು, ನ=ಸರಿಯಲ್ಲ. ತಸ್ಯ=ಆ ಆತ್ಮನಿಗೆ, ಸ್ವಪ್ರಕಾಶತ್ವಾತ್=ಸ್ವಪ್ರಕಾಶತ್ವವು ಇರುವುದರಿಂದ, ನಿತ್ಯಸಿದ್ಧತ್ವಾತ್=ಯಾವಾಗಲೂ ಜ್ಞಾನವಿಷಯತ್ವವು ಇರುವುದರಿಂದ. ನ ದ್ವಿತೀಯಃ=(ಆತ್ಮನ ಧರ್ಮಕ್ಕೆ ಅಜ್ಞಾನವು ಆವರ್ಕವಾಗಿದೆ ಎಂಬ) ಎರಡನೆ ಪಕ್ಷವು ಸರಿಯಿಲ್ಲ. (ಏಕೆಂದರೆ), ತದಭಾವಾತ್ = ತತ್ = ಆ ಆತ್ಮನಲ್ಲಿ ಧರ್ಮದ ಅಭಾವವಿರುವುದರಿಂದ. ತಥಾ ಚ=ಹೀಗೆ ಆತ್ಮಕ್ಕೆ ವ್ಯಾಪಕಾಭಾವಾತ್=ಅಜ್ಞಾನದಿಂದ ಆವೃತವಾದ ಪದಾರ್ಥವೆಂಬ ವ್ಯಾಪಕವು ಇಲ್ಲವಾದ್ದರಿಂದ, ವ್ಯಾಪ್ಯಂ=ವ್ಯಾಪ್ಯವಾದಂತಹ ಅಜ್ಞಾನಂ=ಅಜ್ಞಾನವೆಂಬ ಆವರಣವೂ ಕೂಡ, ನ ಸಂಭವತಿ=ಕೂಡುವುದಿಲ್ಲ, ಇತಿ=ಈ ರೀತಿಯಾಗಿ ತನ್ನಿವರ್ತಕತ್ವೇನ=ತತ್=ಅಜ್ಞಾನ ನಿವೃತ್ತಕತ್ವವು ಇರುವುದರಿಂದ, ಶಾಸ್ತ್ರಸ್ಯ=ಶಾಸ್ತ್ರಕ್ಕೆ, ಅಸಿದ್ಧಸಾಧನತ್ವಂ=ಸಿದ್ಧಸಾಧನತ್ವಾಭಾವವು, ನ ಭವತಿ=ಇರುವುದಿಲ್ಲ. ಇತಿ=ಈ ರೀತಿಯಾಗಿ, ತತ್ರ=ಅಜ್ಞಾನ ಆವರಕತ್ವ ವಿಷಯದಲ್ಲಿ ಆಹ=ಹೇಳಿದರು.

**ಭಾವಾರ್ಥ :—** ಅಜ್ಞಾನವು ಆವರಣವಾದರೆ ಮಾತ್ರ ಆವರಕವಾದ ಅಜ್ಞಾನದ ನಾಶವು ಶಾಸ್ತ್ರಕ್ಕೆ ಪ್ರಯೋಜನವಾಗುತ್ತದೆ. ಆಗ ನಮಗೆ ಸಿದ್ಧವಾಗದ (ಪ್ರಾಪ್ತವಾಗದ) ಅಜ್ಞಾನ ನಿವೃತ್ತಿ ಎಂಬ ಪ್ರಯೋಜನ ಶಾಸ್ತ್ರದಿಂದ ಆಗುವುದರಿಂದ ಶಾಸ್ತ್ರಕ್ಕೆ ಅಸಿದ್ಧಸಾಧನತ್ವವು ಬಂದೀತು ಅಂದರೆ ಸಿದ್ಧಸಾಧನತ್ವ ಹೋಯಿತು ಎಂದು ಹೇಳಬಹುದಿತ್ತು. ಆದರೆ ಅಜ್ಞಾನವು ಆವರ್ಕವೇ ಆಗುವುದಿಲ್ಲ, ಏಕೆಂದರೆ ಯಾವುದೇ ಒಂದು ವಸ್ತುವು ಆವರಕ ಎಂದು ಆಗಬೇಕಾದರೆ ಅದರಿಂದ ಆವೃತವಾದಂತಹ ಪದಾರ್ಥವು ಬೇಕೇಬೇಕು, ಅಂದರೆ ಆವರಣವು ಇದ್ದಲ್ಲಿ ಆವೃತವಾದ ಪದಾರ್ಥ ಇದ್ದೇ ಇರುತ್ತದೆ, ಪ್ರಕೃತ ಅಜ್ಞಾನಕ್ಕೆ ಆವರಕತ್ವವು ಕೂಡುವುದಿಲ್ಲ. ಏಕೆಂದರೆ ಅಜ್ಞಾನವು ಆವರಕ ಎಂದರೆ ಆ ಅಜ್ಞಾನವೆಂಬ ಆವರಕವು ಆತ್ಮನಿಗೊ ಅಥವಾ ಆತ್ಮನಲ್ಲಿರುವ ಧರ್ಮಕ್ಕೋ ಎಂದು ಹೇಳಬೇಕು. ಆತ್ಮನಿಗೆ ಸ್ವಪ್ರಕಾಶತ್ವವು ಇರುವುದರಿಂದ ಆವರಕವಾಗಲಾರದು. ಇನ್ನು ಆತ್ಮನಲ್ಲಿರುವ ಧರ್ಮಕ್ಕೆ ಆವರಕ ಎಂದು ಹೇಳುತ್ತೇನೆ ಎಂದರೆ ನೀನು ಆತ್ಮನಲ್ಲಿ ಯಾವ ಧರ್ಮವನ್ನೂ ಒಪ್ಪುವುದೇ ಇಲ್ಲ. ಆತ್ಮನಲ್ಲಿ ಧರ್ಮವಿದ್ದರೆ ಆ ಧರ್ಮಕ್ಕೆ ಆವರ್ಕವಾಗುತ್ತದೆ ಎಂದು ಹೇಳಬಹುದಿತ್ತು. ಹಾಗೆ ಹೇಳಲು ಬರುವುದಿಲ್ಲ. ಆದ್ದರಿಂದ ಆವೃತವಾದ ಪದಾರ್ಥ ಎಂಬ ವ್ಯಾಪಕವು ಇಲ್ಲವಾದ್ದರಿಂದ ಆವರಣ ನಿವೃತ್ತಿಯು ಹೇಗೆ ಆಗುತ್ತದೆ. ನಿವೃತ್ತಿ ಆಗಬೇಕಾದರೆ ನಿವೃತ್ತಿ ಪ್ರತಿಯೋಗಿಯು ಬೇಕಲ್ಲವೇ, ಅದು ಇಲ್ಲವಾದ್ದರಿಂದ ಅಜ್ಞಾನ ನಿವೃತ್ತಿ ಎಂಬ ಪ್ರಯೋಜನವನ್ನು ಶಾಸ್ತ್ರಕ್ಕೆ ಹೇಳಿ ಸಿದ್ಧಸಾಧನತಾ ಇಲ್ಲ ಎಂದು ಪರಿಹಾರ ಮಾಡಿಕೊಳ್ಳಲು ನಿನಗೆ ಸಾಧ್ಯವಿಲ್ಲ. ಹೀಗಾಗಿ ಐಕ್ಯವು ಸ್ವಪ್ರಕಾಶವಾದ ಆತ್ಮಾಭಿನ್ನವಾಗಿರುವುದರಿಂದ ಐಕ್ಯವು ಸ್ವಪ್ರಕಾಶವೆಂದು ಹೇಳಬೇಕು. ಸ್ವಪ್ರಕಾಶವಾದ್ದರಿಂದ ಸಿದ್ಧಸಾಧನತಾ ಸಿದ್ಧವಾಯಿತು. ಸಿದ್ಧಸಾಧನತಾ ದೋಷವು ಪರಿಹಾರವಾಗಲೇ ಇಲ್ಲ.

**ಅವತಾರಿಕಾ :—** ಮೇಲೆ ಹೇಳಿದಂತೆ ಸಿದ್ಧಸಾಧನತಾ ದೋಷವನ್ನು ಹೇಳಿದಾಗ, ಶಾಸ್ತ್ರಕ್ಕೆ ಸಿದ್ಧಸಾಧನತಾ ಇದ್ದರೆ ಏನು ಬಾಧಕವಿದೆ ಎಂಬ ಶಂಕೆಯನ್ನು ಮಾಡುತ್ತಿದ್ದಾನೆ "ಅಸ್ತು ತರ್ಹಿ" ಎಂಬ ಮುಂದಿನ ಗ್ರಂಥದಿಂದ—

[**ಟೀಕಾ:-** ಅಸ್ತು ತರ್ಹಿ ಸಿದ್ಧಸಾಧನತಾ ಶಾಸ್ತ್ರಸ್ಯ ! ಕೋ ದೋಷಃ ? ಇತಿ ಚೇತ್, ಪರಾರ್ಥತ್ವಾಚ್ಛಾಸ್ತ್ರಸ್ಯ ಪರಸಿದ್ಧಿಬೋಧನೇ ಅನುಪಾದೇಯತ್ವಂ ಸ್ಯಾದಿತ್ಯೇಕಃ ।]

**ಪ್ರತಿಪದಾರ್ಥ :—** ಶಾಸ್ತ್ರಸ್ಯ=ಶಾಸ್ತ್ರಕ್ಕೆ, ಸಿದ್ಧಸಾಧನತಾ=ಜ್ಞಾತಜ್ಞಾಪಕತ್ವವು ಅಸ್ತು=ಇರಲಿ. ತರ್ಹಿ= ಆ ಸಿದ್ಧಸಾಧನತಾ ಇದ್ದರೆ, ಕೋ ದೋಷಃ?=ಶಾಸ್ತ್ರಕ್ಕೆ ದೋಷವೇನು, ಇತಿ ಚೇತ್=ಹೀಗೆ ಶಂಕಾ ಬಂದರೆ, ಶಾಸ್ತ್ರಸ್ಯ=ಶಾಸ್ತ್ರಕ್ಕೆ, ಪರಾರ್ಥತ್ವಾತ್=ಪರಪ್ರವೃತ್ತಿ ನಿವೃತ್ತಿ ಉಪಯೋಗಿ ಅರ್ಥ ಪ್ರತಿಪಾದಕತ್ವವು ಇರುವುದ ರಿಂದ, ಪರಸಿದ್ಧ ಬೋಧನೇ=ಪರರಿಗೆ ಜ್ಞಾತವಾದ ವಿಷಯದ ಜ್ಞಾನವಾಗುತ್ತಿರಲು, ಅನುಪಾದೇಯತ್ವಂ= ಸ್ವೀಕಾರಾವಿಷಯತ್ವವು ಸ್ಯಾತ್=ಬರುತ್ತದೆ, ಇತಿ=ಇಂತೆಂದು, ಏಕಃ (ದೋಷಃ)=ಒಂದು ದೋಷವು,

**ಭಾವಾರ್ಥ :—** ಸಿದ್ಧಸಾಧನತಾ ಶಾಸ್ತ್ರಕ್ಕೆ ಉಂಟು ಎಂದು ಹೇಳಿದ್ದಾಗ ಸಿದ್ಧಸಾಧನತಾ ಬಂದರೆ ಬರಲಿ. ಅದರಿಂದ ಶಾಸ್ತ್ರಕ್ಕೆ ಏನೂ ಬಾಧಕವಿಲ್ಲ. ಏಕೆಂದರೆ ಈಗ ಕಣ್ಣಿನಿಂದ ಮೊದಲನೆ ಸಲ ಪುಸ್ತಕದ ಜ್ಞಾನವು ಆಗುತ್ತದೆ. ಎರಡನೆ ಸಲ ನೋಡಿದಾಗಲೂ ಅದು ಪುಸ್ತಕ ಎಂದು ಜ್ಞಾನವಾಗುತ್ತದೆ. ಹೀಗೆ ಎಷ್ಟು ಸಲ ನೋಡಿದರೂ ಪುಸ್ತಕ ಎಂದೇ ಜ್ಞಾನವಾಗುತ್ತದೆ. ಮೊದಲಿನ ಜ್ಞಾನ ಒಂದನ್ನು ಬಿಟ್ಟು ಉಳಿದೆಲ್ಲ ಜ್ಞಾನಗಳು ಸಿದ್ಧವಿಷಯಕವೇ ಆಗಿವೆ. ಎರಡನೆ ಜ್ಞಾನವನ್ನಾರಂಭಿಸಿ ಅಂದರೆ ಧಾರಾವಾಹಿಕ ಜ್ಞಾನಗಳು ಸಿದ್ಧವಿಷಯಕವೇ ಆಗಿವೆ. ಆದರೂ ಕೂಡ ಇವು ಅಪ್ರಮಾಣ ಗಳಲ್ಲವಾದ್ದರಿಂದ ಸಿದ್ಧಸಾಧನತಾ ಇದ್ದರೂ ಅದರಿಂದ ಬಾಧಕವಿಲ್ಲ. ಅದರಂತೆಯೇ ಶಾಸ್ತ್ರಕ್ಕೆ ಸಿದ್ಧಸಾಧನತಾ ಇದ್ದರೆ ಏನು ಬಾಧಕವಿದೆ ಎಂಬ ಶಂಕಾ ಮಾಡಿದರೆ ಇದಕ್ಕೆ ಉತ್ತರವೇನೆಂದರೆ—ಪ್ರತ್ಯಕ್ಷವು ಜ್ಞಾನವನ್ನು ಹುಟ್ಟಿಸು ವಾಗ ಆ ಜ್ಞಾನದಿಂದ ಉಂಟಾಗಬಹುದಾದ ಪ್ರವೃತ್ತಿ ಅಥವಾ ನಿವೃತ್ತಿಯನ್ನು ಅಪೇಕ್ಷಿಸದು. ಸ್ವಸಾಮರ್ಥ್ಯದಿಂದ ಜ್ಞಾನವು ಹುಟ್ಟುತ್ತದೆ. ಆದರೆ ಶಬ್ದವನ್ನು ಪ್ರಯೋಗಿಸುವಾಗ ಶ್ರೋತೃ ಪುರುಷನಿಗೆ ಪ್ರವೃತ್ತಿ ಅಥವಾ ನಿವೃತ್ತಿಗೆ ಕಾರಣವಾದಂತಹ ಜ್ಞಾನವು ಹುಟ್ಟಿದರೆ ಮಾತ್ರ ಅಂತಹ ಶಬ್ದವು ಶ್ರೋತವ್ಯವಾಗುತ್ತದೆ ಅಂದರೆ ಅಂತಹ ಶಬ್ದವನ್ನು ಕೇಳುತ್ತಾರೆ ಇಲ್ಲದಿದ್ದರೆ ಆ ಶಬ್ದವನ್ನು ಸ್ವೀಕರಿಸುವುದಿಲ್ಲ. ಆದ್ದರಿಂದ ಶಾಸ್ತ್ರವು ಸಿದ್ಧವಾದಂತಹ ಅರ್ಥವನ್ನು ಬೋಧಿಸಿದರೆ, ಶಾಸ್ತ್ರದಿಂದ ಹುಟ್ಟಿದ ಜ್ಞಾನದಿಂದ ಪ್ರವೃತ್ತಿಯಾಗಲಿ ನಿವೃತ್ತಿಯಾಗಲಿ ಹುಟ್ಟುವುದಿಲ್ಲವಾದ್ದರಿಂದ "ಈ ವಿಷಯ ನಮಗೆ ಗೊತ್ತಿದೆ, ಆದ್ದರಿಂದ ಇದನ್ನು ತಿಳಿಸಿಕೊಡುವ ಈ ಗ್ರಂಥದಿಂದ ಏನು ಪ್ರಯೋಜನ" ಎಂಬ ವಿಚಾರವು ಬಂದು ಇದು ಬೇಡ ಎಂದು ಪರಿತ್ಯಾಗ ಮಾಡುತ್ತಾನೆ. ಹೀಗೆ ಶಾಸ್ತ್ರಕ್ಕೆ ಸಿದ್ಧಸಾಧನತ್ವವು ಬರುವುದರಿಂದ ಸ್ವೀಕಾರಾವಿಷಯತ್ವ ಎಂಬ ದೋಷವು ಬರುತ್ತದೆ ಎಂದು ಒಂದು ದೋಷವು,

[**ಟೀಕಾ :—** ಅಪರಂ ಚಾಹ—]

**ಪ್ರತಿಪದಾರ್ಥ :—** ಅಪರಂಚ=ಇನ್ನೊಂದು ದೋಷವನ್ನು, ಆಹ=ಹೇಳುತ್ತಾರೆ—

[**ಮೂಲ :—**"ಅನಧಿಗತಾರ್ಥಗಂತೃ ಪ್ರಮಾಣಂ" ಇತಿ ತನ್ಮತಂ.]

**ಪ್ರತಿಪದಾರ್ಥ :—** ಅನಧಿಗತ=ತಿಳಿಯಲ್ಪಡದೇ ಇರತಕ್ಕಂತಹ, ಅರ್ಥ=ಪದಾರ್ಥದ ಗಂತೃ=ಜ್ಞಾನಕ್ಕೆ ಕಾರಣವು, ಪ್ರಮಾಣಂ=ಪ್ರಮಾಣವು. ಇತಿ=ಇಂತೆಂದು, ತನ್ಮತಂ=ಮಾಯಾವಾದ ಮತವು.

**ಭಾವಾರ್ಥ :—** ಅಜ್ಞಾತಾರ್ಥಜ್ಞಾಪಕವು ಎಂದರೆ ತಿಳಿಯದೆ ಇದ್ದಂತಹ ಅರ್ಥವನ್ನು ತಿಳಿಸಿಕೊಡುವಂತಹುದು ಪ್ರಮಾಣವು ಎಂದು ಮಾಯಾವಾದಿಯ ಮತವಾಗಿದೆ.

[**ಟೀಕಾ :—** ಗಂತೃಶಬ್ದೇನ ಅವಗತಿಸಾಧನಮುಚ್ಯತೇ । ಅನಧಿಗತೇತಿ ಸ್ಮೃತ್ಯಾದಿ ವ್ಯಾದಾಸಾರ್ಥಂ । ಶುಕ್ತಿರಜತಾದಿ ಜ್ಞಾನನಿರಾಸಾಯ ಅರ್ಥಗ್ರಹಣಮ್ । ಅರ್ಥಸ್ಯ ಚ ಯಥಾವಸ್ಥಿತಸ್ಯ ವಿವಕ್ಷಿತತ್ವಾತ್ । ಅರ್ಥಸ್ಯ ಫಲಸ್ಯ ಚ ನಿವೃತ್ತ್ಯರ್ಥಂ ಗಂತೃ ಪದಮ್ । ತಸ್ಯ ಚ ಸಾಧನಪರತ್ವಾತ್ನ ಕರ್ತರ್ಯತಿ ಪ್ರಸಂಗಃ ।]

**ಪ್ರತಿಪದಾರ್ಥ :**—ಗಂತೃಶಬ್ದೇನ = ಗಂತೃ ಎಂಬ ಶಬ್ದದಿಂದ, ಅವಗತಿ ಸಾಧನಂ = ಅವಗತಿ = ಜ್ಞಾನಕ್ಕೆ, ಸಾಧನಂ = ಕಾರಣವಾದಂತಹುದು (ಎಂದು), ಉಚ್ಯತೇ = ಹೇಳಲ್ಪಡುತ್ತದೆ. ಅನಧಿಗತೇತಿ = ಅನಧಿಗತ ಎಂಬ ಗ್ರಂಥದಿಂದ, ಸ್ಮೃತ್ಯಾದಿ = ಸ್ಮೃತಿಗೆ ಕಾರಣವಾದಂತಹ ಸಂಸ್ಕಾರದಲ್ಲಿ, ವ್ಯಾದಾಸಾರ್ಥಂ = ಪ್ರಮಾಣ ಲಕ್ಷಣವನ್ನು ಪರಿಹಾರ ಮಾಡುವುದಕ್ಕೋಸ್ಕರವಾಗಿ, ಶುಕ್ತಿರಜತಾದಿ ನಿರಾಸಾಯ = ಸಿಂಪನ್ನು ನೋಡಿ ಇದು ಬೆಳ್ಳಿ ಎಂಬ ಜ್ಞಾನವನ್ನು ಹುಟ್ಟಿಸುವ ಇಂದ್ರಿಯದಲ್ಲಿ, ನಿರಾಸಾಯ ಪ್ರಮಾಣ ಲಕ್ಷಣದ ಅತಿವ್ಯಾಪ್ತಿಯನ್ನು ಪರಿಹರಿಸಲು, ಅರ್ಥಗ್ರಹಣಮ್ = ಅರ್ಥ ಎಂಬ ಪದದ ಸ್ವೀಕಾರವು. ಅರ್ಥಸ್ಯ ಚ = ಅರ್ಥಕ್ಕಾದರೂ, ಯಥಾವ ಸ್ಥಿತಸ್ಯ = ಸತ್ಯವಾದುದಕ್ಕೆ ವಿವಕ್ಷಿತತ್ವಾತ್ = ಹೇಳಲ್ಪಡಲು ಇಚ್ಛಾವಿಷಯತ್ವವು ಇರುವುದರಿಂದ, ಅರ್ಥಸ್ಯ = ವಿಷಯಕ್ಕೆ, ಚ = ಮತ್ತು, ಫಲಸ್ಯ = ಜ್ಞಾನಕ್ಕೆ ನಿವೃತ್ತ್ಯರ್ಥಂ = ಪ್ರಮಾಣ ಲಕ್ಷಣವನ್ನು ಪರಿಹಾರ ಮಾಡಲು, ಗಂತೃಪದಮ್ = ಗಂತೃ ಎಂಬ ಪದವು ತಸ್ಯ ಚ = ಆ ಗಂತೃ ಶಬ್ದಾರ್ಥದಲ್ಲಿ ಅಂತರ್ಗತವಾದ ಕಾರಣ ಎಂಬ ಪದಕ್ಕೆ, ಸಾಧನಪರತ್ವಾತ್ = ವ್ಯಾಪಾರ ದ್ವಾರಾ ಕಾರಣ ಎಂದರೆ ಕರಣ ಎಂದು ಅರ್ಥವನ್ನು ಇಟ್ಟುಕೊಂಡಿರುವುದರಿಂದ, ಕರ್ತರಿ = ಜ್ಞಾನಾಶ್ರಯವಾದ ಆತ್ಮನಲ್ಲಿ (ಅದರಂತೆ ಜ್ಞಾನವಿಷಯದಲ್ಲಿಯೂ) ಅತಿಪ್ರಸಂಗಃ = ಅತಿ ವ್ಯಾಪ್ತಿಯು, ನ = ಇಲ್ಲ.

**ಭಾವಾರ್ಥ :**— ಮೂಲದಲ್ಲಿ ಗಂತೃ ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಗಂತೃ ಎಂಬಲ್ಲಿ ಗಮಲ್ಯಧಾತುವಿನ ಮೇಲೆ ಕರ್ತ್ರರ್ಥಕವಾದಂತಹ ತೃಚ್ ಪ್ರತ್ಯಯ ಇರುವುದರಿಂದ ಜ್ಞಾನಕರ್ತಾ ಎಂದರೆ ಜ್ಞಾನಾಶ್ರಯ ಎಂದು ಅರ್ಥವಾಗುತ್ತದೆ. ಇದು ಆತ್ಮನಲ್ಲಿ ಬರುತ್ತದೆ ವಿನಹ ಪ್ರತ್ಯಕ್ಷ, ಅನುಮಾನ ಆಗಮಗಳಲ್ಲಿ ಬರುವುದಿಲ್ಲ ಆದ್ದರಿಂದ ಅಸಂಭವ ಎಂಬ ದೋಷವು ಬರುತ್ತದೆ (ಅಸಂಭವೋ ನಾಮ ಯಾವಲ್ಲಕ್ಷ್ಯಾವೃತ್ತಿತ್ವಂ ಅಂದರೆ ಯಾವ ಲಕ್ಷ್ಯದಲ್ಲಿಯೂ ಲಕ್ಷಣವಿಲ್ಲದಿರುವುದು) ಎಂದು ಪ್ರಶ್ನೆ ಮಾಡಿದರೆ ಅದಕ್ಕೆ ಉತ್ತರವಾಗಿ ಗಂತೃ ಶಬ್ದಾರ್ಥವನ್ನು ಹೇಳುತ್ತಾರೆ, ಏನೆಂದರೆ ಗಂತೃ ಎಂದರೆ ಜ್ಞಾನಕ್ಕೆ ಕಾರಣವಾದಂತಹುದು ಎಂದು. ಅಂದರೆ ವ್ಯಾಪಾರವನ್ನು ಮಧ್ಯದಲ್ಲಿಟ್ಟುಕೊಂಡು ಯಾವುದು ಜ್ಞಾನವನ್ನು ಹುಟ್ಟಿಸುತ್ತದೋ ಅದು ಜ್ಞಾನ ಸಾಧನವು. ಅದನ್ನು ಇಲ್ಲಿ ಗಂತೃ ಶಬ್ದದಿಂದ ಹೇಳುತ್ತಿದ್ದಾರೆ. ಆದ್ದರಿಂದ ಅನಧಿಗತಾರ್ಥ ಗಂತೃ ಎಂದರೆ ಅಜ್ಞಾತಾರ್ಥವಿಷಯಕಜ್ಞಾನಸಾಧನವು ಎಂದರ್ಥ. ಆದ್ದರಿಂದ ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳಲ್ಲಿ ಇಂತಹ ಅನಧಿಗತಾರ್ಥಗಂತೃತ್ವ ಎಂಬ ಪ್ರಮಾಣ ಲಕ್ಷಣವು ಬರುವುದರಿಂದ ಮೇಲೆ ಶಂಕೆ ಮಾಡಿದ ಅಸಂಭವ ಎಂಬ ದೋಷವಿಲ್ಲ.

ಅನಧಿಗತಾರ್ಥಗಂತೃತ್ವಂ ಪ್ರಮಾಣ ಸಾಮಾನ್ಯಲಕ್ಷಣಂ ಎಂಬಲ್ಲಿ ಅನಧಿಗತತ್ವಂ ಎಂಬ ವಿಶೇಷಣವನ್ನು ಅರ್ಥದಲ್ಲಿ ಕೊಟ್ಟಿದ್ದಾರೆ ಅದನ್ನು ಕೊಡದೇ ಇದ್ದರೆ "ಅರ್ಥಗಂತೃತ್ವಂ ಪ್ರಮಾಣ ಲಕ್ಷಣಂ" ಎಂದು ಇಷ್ಟೇ ಆಗುತ್ತದೆ. ಈ ಲಕ್ಷಣಕ್ಕೆ ಸ್ಮರಣೆಗೆ ಕಾರಣವಾದ ಸಂಸ್ಕಾರದಲ್ಲಿ ಅತಿವ್ಯಾಪ್ತಿದೋಷವು ಬರುತ್ತದೆ. (ಅತಿ ವ್ಯಾಪ್ತಿ ಎಂದರೆ ಲಕ್ಷಣವು ಲಕ್ಷ್ಯದಲ್ಲಿದ್ದು ಅಲಕ್ಷ್ಯದಲ್ಲಿಯು ಇರುವುದು). ಏಕೆಂದರೆ ಸ್ಮರಣೆಗೆ ಪದಾರ್ಥವು ವಿಷಯವಾಗಿರುತ್ತದೆ. ಆದ್ದರಿಂದ ಅರ್ಥವಿಷಯಕ ಜ್ಞಾನ ಎಂದರೆ ಸ್ಮರಣೆ ಎಂದರ್ಥ. ಆ ಸ್ಮರಣೆಗೆ ಕಾರಣವಾಗಿದೆ ಸಂಸ್ಕಾರವು. ಆದ್ದರಿಂದ

ಅರ್ಥವಿಷಯಕ ಜ್ಞಾನ ಕಾರಣತ್ವವು ಸಂಸ್ಕಾರದಲ್ಲಿ ಬರುತ್ತದೆ, ಆದ್ದರಿಂದ ಸಂಸ್ಕಾರದಲ್ಲಿ ಅತಿವ್ಯಾಪ್ತಿ ಬಂದಿತು, ಇದನ್ನು ಪರಿಹರಿಸಲು ಅರ್ಥದಲ್ಲಿ ಅನಧಿಗತತ್ವ ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಇದರಿಂದ ಲಕ್ಷಣವು ಏನಾಯಿತೆಂದರೆ ಅಜ್ಞಾತಾರ್ಥವಿಷಯಕ ಜ್ಞಾನಜನಕತ್ವಂ ಎಂದು ಪ್ರಮಾಣ ಲಕ್ಷಣವನ್ನು ಹೇಳಿದಂತಾಯಿತು. ಈ ಲಕ್ಷಣವು ಸಂಸ್ಕಾರದಲ್ಲಿ ಬರುವುದಿಲ್ಲ. ಏಕೆಂದರೆ ಸಂಸ್ಕಾರದಿಂದ ಹುಟ್ಟಿದಂತಹ ಸ್ಮರಣೆಗೆ ವಿಷಯವಾದ ಪದಾರ್ಥವು ಮೊದಲು ನಮಗೆ ಜ್ಞಾತವೇ ಆಗಿರುತ್ತದೆ, ಹೇಗೆಂದರೆ ಪದಾರ್ಥ ಜ್ಞಾನವು ಪ್ರತ್ಯಕ್ಷದಿಂದಲೊ, ಅನುಮಾನದಿಂದಲೊ ಅಥವಾ ಆಗಮುಗಳಿಂದಲೋ ಹುಟ್ಟುತ್ತದೆ. ಆ ಜ್ಞಾನದಿಂದ ಮನಸ್ಸಿನಲ್ಲಿ ಒಂದು ಸಂಸ್ಕಾರವು ಹುಟ್ಟುತ್ತದೆ. ಆ ಸಂಸ್ಕಾರದಿಂದ ಸ್ಮರಣವು ಹುಟ್ಟುತ್ತದೆ. ಹೀಗೆ ಯಾವುದೇ ಪದಾರ್ಥದ ಸ್ಮರಣೆಯು ಹುಟ್ಟಬೇಕಾದರೆ ಅದರ ಸಂಸ್ಕಾರವು ಇರಲೇಬೇಕು. ಸಂಸ್ಕಾರವಿರಬೇಕಾದರೆ ಅನುಭವವು ಇರಲೇಬೇಕು. ಸ್ಮರಣೆಗೆ ವಿಷಯವಾದ ಪದಾರ್ಥದ ಅನುಭವವು ನಮಗೆ ಇದೆ ಎಂದಾಯಿತು ಅಂದರೆ ಅದು ಸಿದ್ಧವಾಯಿತು, ಆದ್ದರಿಂದ ನಮಗೆ ಪದಾರ್ಥವು ಜ್ಞಾತವಾಗಿದೆ. ಜ್ಞಾತವಾದ ಅರ್ಥವನ್ನು ವಿಷಯೀಕರಿಸುವ ಸ್ಮರಣೆಗೆ ಸಂಸ್ಕಾರವು ಕಾರಣ ವಾಗಿದೆ, ಆಗ ಜ್ಞಾತಾರ್ಥವಿಷಯಕ ಜ್ಞಾನಜನಕತ್ವವು ಸಂಸ್ಕಾರದಲ್ಲಿ ಬರುವುದೇ ವಿನಹ ಅಜ್ಞಾತಾರ್ಥವಿಷಯಕ ಜ್ಞಾನಜನಕತ್ವ ಎಂಬ ಪ್ರಮಾಣ ಲಕ್ಷಣವು ಸಂಸ್ಕಾರದಲ್ಲಿ ಬರುವುದಿಲ್ಲ. ಆದ್ದರಿಂದ ಅತಿವ್ಯಾಪ್ತಿ ಇಲ್ಲ.

ಅನಧಿಗತಗಂತೃತ್ವಂ ಎಂದರೆ ಅಜ್ಞಾತವಿಷಯಕ ಜ್ಞಾನಜನಕತ್ವಂ ಪ್ರಮಾಣಸಾಮಾನ್ಯಲಕ್ಷಣಂ ಎಂದು ಇಷ್ಟೇ ಸಾಕು, ಅರ್ಥ ಎಂಬ ಪದವು ಬೇಡ ಎಂದು ಹೇಳಿದರೆ ಅಜ್ಞಾತವಿಷಯಕ ಜ್ಞಾನಜನಕತ್ವಂ ಎಂಬ ಲಕ್ಷಣಕ್ಕೆ ದುಷ್ಟಕರಣದಲ್ಲಿ ಅತಿ ವ್ಯಾಪ್ತಿ ಬರುತ್ತದೆ. ಹೇಗೆಂದರೆ ಕಪ್ಪೆಚಿಪ್ಪನ್ನು ನೋಡಿ ಅದು ಬೆಳ್ಳಿ ಎಂಬ ಜ್ಞಾನವು ಹುಟ್ಟುತ್ತದೆ. ಈ ಸಿಂಪಿನಲ್ಲಿ ಆರೋಪಿತವಾದ ಬೆಳ್ಳಿಯು ನಮಗೆ ಮೊದಲು ಜ್ಞಾತವಾಗಿಲ್ಲ ಎಂದರೆ ಅನಧಿಗತ ವಾಗಿದೆ. ಆದ್ದರಿಂದ ಅನಧಿಗತವಾದ ವಿಷಯ ಶುಕ್ತ್ಯಧ್ಯಸ್ಥರಜತವಾಗಿದೆ. ಅದನ್ನು ವಿಷಯೀಕರಿಸಿದೆ— "ಇದಂ ರಜತಂ" ಇತ್ಯಾಕಾರಕ ಜ್ಞಾನವು. ತಾದೃಶ ಜ್ಞಾನಜನಕತ್ವವು ದೂರಸ್ಥತ್ವಾದಿ ದೋಷ ವಿಶಿಷ್ಟ ವಾದ ಚುಕ್ಷುರಿಂದ್ರಿಯದಲ್ಲಿದೆ. ಆದ್ದರಿಂದ ಅನಧಿಗತವಿಷಯಕಜ್ಞಾನಜನಕತ್ವ ಎಂಬ ಪ್ರಮಾಣ ಲಕ್ಷಣವು ಅಪ್ರ ಮಾಣವಾದ ಚಕ್ಷುರಿಂದ್ರಿಯದಲ್ಲಿ ಬರುವುದರಿಂದ ಅತಿ ವ್ಯಾಪ್ತಿಯು ಬಂದಿತು. ಇದನ್ನು ಪರಿಹರಿಸಲು ಅರ್ಥ ಎಂಬ ಪದವನ್ನು ಸ್ವೀಕರಿಸಬೇಕು. ಅರ್ಥ ಎಂದರೆ ಸತ್ಯವಾದ ಪದಾರ್ಥ ಎಂದರ್ಥ. ಪ್ರಕೃತದಲ್ಲಿ ಶುಕ್ತ್ಯಧ್ಯಸ್ಥ ರಜತವು ಅಸತ್ತಾಗಿದೆ. ಅದು ಅರ್ಥವಲ್ಲ. ಹೀಗಾಗಿ ಅನಧಿಗತಾರ್ಥ ಎಂಬ ಪದದಿಂದ ಶುಕ್ತ್ಯಧ್ಯಸ್ಥ ರಜತವನ್ನು ಸ್ವೀಕರಿಸಲು ಬರುವುದಿಲ್ಲವಾದ್ದರಿಂದ ಅನಧಿಗತಾರ್ಥವಿಷಯುಕ ಜ್ಞಾನಜನಕತ್ವ ಎಂಬ ಪ್ರಮಾಣಲಕ್ಷಣವು ದುಷ್ಟ ಇಂದ್ರಿಯದಲ್ಲಿ ಬರುವುದಿಲ್ಲವಾದ್ದರಿಂದ ಅತಿ ವ್ಯಾಪ್ತಿಯು ಇಲ್ಲ. ಇಲ್ಲಿ ಅರ್ಥ ಶಬ್ದಕ್ಕೆ ಯಥಾರ್ಥ ಎಂಬ ಅರ್ಥ ವಿರುವುದರಿಂದ.

ಹಾಗಾದರೆ ಅನಧಿಗತಾರ್ಥತ್ವಂ ಪ್ರಮಾಣ ಸಾಮಾನ್ಯ ಲಕ್ಷಣಂ ಎಂದು ಇಷ್ಟೆ ಸಾಕು, ಗಂತೃ ಎಂಬ ಪದ ಬೇಡ ಎಂದು ಹೇಳಿದರೆ ಜ್ಞಾನ ವಿಷಯದಲ್ಲಿ ಮತ್ತು ಜ್ಞಾನದಲ್ಲಿ ಪ್ರಮಾಣ ಲಕ್ಷಣಕ್ಕೆ ಅತಿ ವ್ಯಾಪ್ತಿ ಬರುತ್ತದೆ. ಅದನ್ನು ಪರಿಹರಿಸಲು ಗಂತೃ ಎಂಬ ಪದವನ್ನು ಸ್ವೀಕರಿಸಿದೆ. ಇಲ್ಲಿ ಅನಧಿಗತಾರ್ಥತ್ವಂ ಎಂದು ಹೇಳಿದರೆ ಅನಧಿ ಗತಶ್ಚಾಸೌ ಅರ್ಥಶ್ಚ ಅನಧಿಗತಾರ್ಥ ಎಂದು ಕರ್ಮಧಾರಯ ಸಮಾಸವನ್ನು ಮಾಡಲು ಬರುತ್ತದೆ. ಹೀಗೆ ಮಾಡಿದಾಗ ಅನಧಿಗತಾರ್ಥತ್ವಂ ಎಂಬ ಲಕ್ಷಣಕ್ಕೆ ವಿಷಯದಲ್ಲಿ ಅತಿವ್ಯಾಪ್ತಿಯು ಬರುತ್ತದೆ. ವಿಷಯವು ಮೊದಲು ಅಜ್ಞಾತವಾಗಿರುವುದರಿಂದ ಅನಧಿಗತಾರ್ಥತ್ವವು ವಿಷಯದಲ್ಲಿ ಬಂದಿತು. ಇನ್ನು ಅನಧಿಗತಃ ಅರ್ಥಃ ಯಸ್ಮಿನ್ ತತ್ = ಅನಧಿಗತಾರ್ಥಂ ತಸ್ಯ ಭಾವಃ =ಅನಧಿಗತಾರ್ಥತ್ವಂ ಎಂದು ಬಹುವ್ರೀಹಿ ಸಮಾಸವನ್ನು ಮಾಡಿದಾಗ ಜ್ಞಾನದಲ್ಲಿ ಅತಿ ವ್ಯಾಪ್ತಿ ಬರುತ್ತದೆ. ಜ್ಞಾನಕ್ಕೆ ವಿಷಯವಾದ ಪದಾರ್ಥವು ಜ್ಞಾನ ಹುಟ್ಟುವ ಮೊದಲು ಅನಧಿಗತ ವಾಗಿರುತ್ತದೆ. ಆದ್ದರಿಂದ ಆ ಜ್ಞಾನವು ಅನಧಿಗತವಾದ ಅರ್ಥವುಳ್ಳದ್ದು ಆಯಿತು. ಆದ್ದರಿಂದ ಅನಧಿಗತಾರ್ಥತ್ವವು

ಜ್ಞಾನವದಲ್ಲಿ ಬಂದಿತು. ಜ್ಞಾನ ಸಾಧನವು (ಪ್ರತ್ಯಕ್ಷ, ಅನುಮಾನ, ಆಗಮ) ಪ್ರಮಾಣವೇ ವಿನಹ ಜ್ಞಾನವು ಪ್ರಮಾಣ ವಲ್ಲ ಎಂದು ಭಾಟ್ಟರ ಮತ. ಹೀಗೆ ಅನಧಿಗತಾರ್ಥತ್ವ ಎಂಬ ಲಕ್ಷಣಕ್ಕೆ ವಿಷಯದಲ್ಲಿ ಮತ್ತು ಜ್ಞಾನದಲ್ಲಿ ಅತಿ ವ್ಯಾಪ್ತಿಯು ಬಂದಿತು. ಅದನ್ನು ಪರಿಹರಿಸಲು ಗಂತೃ ಎಂಬ ಪದವನ್ನು ಸೇರಿಸಿದ್ದಾರೆ. ಇಲ್ಲಿ ಜ್ಞಾನದ ವಿಷಯ ಮತ್ತು ಜ್ಞಾನ ಇವೆರಡೂ ಜ್ಞಾನ ಸಾಧನವಲ್ಲ, ಆದ್ದರಿಂದ ಅನಧಿಗತಾರ್ಥಗಂತೃತ್ವಂ ಅಂದರೆ ಅಜ್ಞಾತಾರ್ಥ ವಿಷಯಕ ಜ್ಞಾನಸಾಧನತ್ವ ಎಂಬ ಲಕ್ಷಣವು ಜ್ಞಾನದಲ್ಲಾಗಲಿ ಅಥವಾ ವಿಷಯದಲ್ಲಾಗಲಿ ಬರಲಿಲ್ಲವಾದ್ದರಿಂದ ಅತಿ ವ್ಯಾಪ್ತಿ ಇಲ್ಲ.

ಹಾಗಾದರೆ ಗಂತೃ ಪದಕ್ಕೆ ಜ್ಞಾನ ಕರ್ತಾ ಎಂದು ಅರ್ಥವಾಗುತ್ತದೆ. ಆಗ ಅನಧಿಗತಾರ್ಥಗಂತೃತ್ವ ಎಂಬ ಲಕ್ಷಣವು ಕರ್ತೃವಿನಲ್ಲಿ ಅತಿ ವ್ಯಾಪ್ತವಾಗುತ್ತದೆ ಮತ್ತು ಗಂತೃ ಶಬ್ದಕ್ಕೆ ಜ್ಞಾನ ಕಾರಣ ಎಂದು ಇಷ್ಟೇ ಅರ್ಥವನ್ನು ಇಟ್ಟುಕೊಂಡರೆ ಜ್ಞಾನಂ ಪ್ರತಿ ವಿಷಯಸ್ಯ ಕಾರಣತ್ವಂ ಎಂಬ ನಿಯಮಾನುಸಾರವಾಗಿ ವಿಷಯದಲ್ಲಿ ಕೂಡ ಅತಿ ವ್ಯಾಪ್ತ ವಾಗುತ್ತದೆ ಎಂಬ ಶಂಕೆ ಬಂದರೆ ಅದಕ್ಕೆ ಉತ್ತರವೇನೆಂದರೆ ಗಂತೃ ಶಬ್ದಾರ್ಥದಲ್ಲಿ ಅಂತರ್ಗತವಾದ ಕಾರಣ ಎಂಬ ಪದಕ್ಕೆ ವ್ಯಾಪಾರದ್ವಾರಾ ಕಾರಣ ಎಂದರೆ ಕರಣ ಎಂದು ಅರ್ಥವನ್ನು ಇಟ್ಟುಕೊಂಡಿರುವುದರಿಂದ ಜ್ಞಾನಾಶ್ರಯನಾದ ಆತ್ಮನಲ್ಲಿ ಅದರಂತೆಯೇ ಜ್ಞಾನ ವಿಷಯದಲ್ಲಿಯೂ ಅತಿ ವ್ಯಾಪ್ತಿಯು ಇಲ್ಲ.

[**ಟೀಕಾ:—** ಏತದ್ಭಾಟ್ಟಾನಾಂ ಪ್ರಮಾಣ ಲಕ್ಷಣಮ್ । 'ವ್ಯವಹಾರೇ ಭಟ್ಟ ನಯಃ' ಇತಿ ಮಾಯಾವಾದಿಭಿರಂಗೀ ಕಾರಾತ್ತನ್ಮತಮಿತ್ಯುಕ್ತಮ್ । ]

**ಪ್ರತಿಪದಾರ್ಥ:—** ಏತತ್ = ಅನಧಿಗತಾರ್ಥ ಗಂತೃತ್ವಂ ಎಂಬುವುದು, ಭಾಟ್ಟಾನಾಂ = ಭಾಟ್ಟರಿಗೆ (ಸಮ್ಮತ ವಾದಂತಹ), ಪ್ರಮಾಣ ಲಕ್ಷಣಮ್ = ಪ್ರಮಾಣ ಲಕ್ಷಣವು. ವ್ಯವಹಾರೇ = ವಾಕ್ಯಾರ್ಥ ವಿಷಯದಲ್ಲಿ, ಭಟ್ಟನಯಃ = ಭಾಟ್ಟರ ಅನುಸರಣವು ಇತಿ = ಇಂತೆಂದು, ಮಾಯಾವಾದಿಭಿಃ = ಮಾಯಾವಾದಿಗಳಿಂದ, ಅಂಗೀಕಾರಾತ್ = ಅಂಗೀಕರಿಸಿದ್ದರಿಂದ. ತನ್ಮತಂ = ಇದು ಮಾಯಾವಾದಿಯ ಮತ, ಇತಿ = ಇಂತೆಂದು ಉಕ್ತಮ್ = (ಶ್ರೀಮದಾಚಾರ್ಯ ರಿಂದ) ಹೇಳಲ್ಪಟ್ಟಿದೆ.

**ಭಾವಾರ್ಥ :—**ಅನಧಿಗತಾರ್ಥಗಂತೃ ಪ್ರಮಾಣ ಸಾಮಾನ್ಯ ಲಕ್ಷಣಂ ಎಂದು ಭಾಟ್ಟರು ಹೇಳಿದ್ದರೂ ಸಹ ವಾಕ್ಯಾರ್ಥ ವಿಷಯದಲ್ಲಿ ಭಾಟ್ಟರ ಮತವನ್ನು ಅನುಸರಿಸುತ್ತೇವೆ ಎಂದು ಮಾಯಾವಾದಿಗಳು ಹೇಳಿದ್ದಾರೆ. ಆದ್ದರಿಂದ ಮಾಯಿಯು ಹೇಳಿದ್ದು ಎಂದು ಅರ್ಥವಾಗುತ್ತದೆ. ಆದ್ದರಿಂದ ಶ್ರೀಮದಾಚಾರ್ಯರು 'ತನ್ಮತಂ' ಎಂದು ಹೇಳಿದ್ದು ಸರಿಯಾಯಿತು.

"ಅನಧಿಗತಾರ್ಥಗಂತೃ ಪ್ರಮಾಣಂ" ಇತಿ ತನ್ಮತಂ ಎಂಬ ಗ್ರಂಥದಿಂದ ಶಾಸ್ತ್ರಕ್ಕೆ ಏನು ದೋಷವನ್ನು ಹೇಳಿದಂತಾಯಿತು ಎನ್ನುವುದನ್ನು ಶ್ರೀಮಟ್ಟೀಕಾಕೃತ್ಪಾದರು ತಿಳಿಸುತ್ತಿದ್ದಾರೆ "ಯದಿ ಶಾಸ್ತ್ರಂ" ಎಂಬ ಮುಂದಿನ ಟೀಕಾ ವಾಕ್ಯದಿಂದ—

[**ಟೀಕಾ:—** ಯದಿ ಶಾಸ್ತ್ರಂ ಅಧಿಗತಮೇವಾರ್ಥಮವಗಮಯೇತ್ತದಾ ಪ್ರಮಾಣ ಲಕ್ಷಣಾಭಾವಾದಪ್ರಮಾಣಂ ಪ್ರಸಜ್ಯೇತ ಇತಿ । ]

**ಪ್ರತಿಪದಾರ್ಥ :—** ಯದಿ = ಒಂದು ವೇಳೆ, ಶಾಸ್ತ್ರಂ = ಶಾಸ್ತ್ರವು, ಅಧಿಗತಂ = ತಿಳಿಯಲ್ಪಟ್ಟಂತಹ, ಅರ್ಥಮೇವ ಅರ್ಥವನ್ನೇ, ಅವಗಮಯೇತ್ = ತಿಳಿಸಿಕೊಟ್ಟರೆ, ತದಾ = ಆಗ, ಪ್ರಮಾಣಲಕ್ಷಣಾಭಾವಾತ್ = ಪ್ರಮಾಣಲಕ್ಷಣವಿಲ್ಲ

ವಾದ್ದರಿಂದ (ಶಾಸ್ತ್ರವು), ಅಪ್ರಮಾಣಂ=ಅಪ್ರಮಾಣವು, ಪ್ರಸಜ್ಯೇತ=ಆಗುವ ಪ್ರಸಂಗ ವಿಷಯವಾದೀತು. ಇತಿ=ಇಂತೆಂದು,

**ಭಾವಾರ್ಥ:—** ಶಾಸ್ತ್ರವು ಸಿದ್ಧವಾದ ಐಕ್ಯವನ್ನೇ ಪ್ರತಿಪಾದಿಸಿದರೆ ಆಗ ಶಾಸ್ತ್ರಕ್ಕೆ ಅಧಿಗತಾರ್ಥಗಂತೃತ್ವವು ಬರುತ್ತದೆ ವಿನಹ ನೀನು ಅಂಗೀಕಾರ ಮಾಡಿದ ಅನಧಿಗತಾರ್ಥಗಂತೃತ್ವ ರೂಪ ಪ್ರಮಾಣ ಲಕ್ಷಣವು ಶಾಸ್ತ್ರಕ್ಕೆ ಇಲ್ಲ ಎಂದಾಗುತ್ತದೆ. ಪ್ರಮಾಣ ಲಕ್ಷಣ ಇಲ್ಲ ಎಂದರೂ ಒಂದೇ ಅಥವಾ ಅಪ್ರಮಾಣವೆಂದರೂ ಒಂದೇ. ಹೀಗೆ ಶಾಸ್ತ್ರವು ಅಪ್ರಮಾಣವಾಗುವ ಪ್ರಸಂಗವು ನಿನ್ನ ಮತರೀತ್ಯ ಬರುವದು "ಯತ್ ಅಪ್ರಮಾಣಂ ತತ್ ಅನಾರಂಭಣೀಯಂ ಯಥಾ ನದೀತೀರೆ ಪಂಚಫಲಾನಿ ಸಂತಿ ನದಿಯ ತೀರದಲ್ಲಿ ಐದು ಹಣ್ಣುಗಳು ಇವೆ ಎಂಬ, ಮೋಸಗಾರನ ವಾಕ್ಯದಂತೆ.

ಈ ರೀತಿ ಐಕ್ಯವು ಆತ್ಮನ ದೆಸೆಯಿಂದ ಭಿನ್ನ ಎಂಬರೆ ಐಕ್ಯಕ್ಕೆ ಮಿಥ್ಯಾತ್ವ ಪ್ರಸಂಗವು ಬರುತ್ತದೆ. ಅಂತಹ ಮಿಥ್ಯಾಭೂತ ಐಕ್ಯ ಪ್ರತಿಪಾದನವನ್ನು ಮಾಡಿದರೆ ಮಿಥ್ಯಾಭೂತ ಅರ್ಥಪ್ರತಿಪಾದಕತ್ವವು ಶಾಸ್ತ್ರಕ್ಕ ಬಂದು ಶಾಸ್ತ್ರಕ್ಕೆ ಅನಾರಂಭಣೀಯತ್ವವು ಬರುತ್ತದೆ. ಆ ಐಕ್ಯವನ್ನು ಆತ್ಮನಿಂದ ಅಭಿನ್ನವೆಂದರೆ ಆತ್ಮನು ಸ್ವಪ್ರಕಾಶವಾದ್ದರಿಂದ ಐಕ್ಯವೂ ಸ್ವಪ್ರಕಾಶವೆಂದು ಹೇಳಬೇಕು. ಸ್ವಪ್ರಕಾಶವೆಂದರೆ ಸಿದ್ಧವಾಗಿದೆ ಎಂದರ್ಥ, ಇಂತಹ ಸಿದ್ಧವಾದ ಐಕ್ಯವನ್ನು ಪ್ರತಿಪಾದಿಸಿದರೆ ಶಾಸ್ತ್ರಕ್ಕೆ ಸಿದ್ಧಸಾಧನತಾ ದೋಷವು ಬರುತ್ತದೆ. ಸಿದ್ಧಸಾಧನತಾ ಬರುವುದರಿಂದ ಆದರಲ್ಲಿ ಪ್ರೇಕ್ಷಾವತ್ಕರ್ತೃಕ ಸ್ವೀಕಾರಾವಿಷಯತ್ವಂ ಎಂಬ ಅನಾರಂಭಣೀಯತ್ವವು ಬರುತ್ತದೆ, ಇದು ಒಂದು ದೋಷ. ಇದಲ್ಲದೆ ಮಾಯಾವಾದಿ ಮತರೀತ್ಯಾ ಶಾಸ್ತ್ರಕ್ಕೆ ಅಪ್ರಮಾಣ್ಯವು ಬರುತ್ತದೆ. ಏಕೆಂದರೆ ಅನಧಿಗತಾರ್ಥಗಂತೃತ್ವಂ ಅಂದರೆ ಅಜ್ಞಾತಾರ್ಥ ಜ್ಞಾನಜನಕತ್ವಂ ಪ್ರಮಾಣ ಸಾಮಾನ್ಯ ಲಕ್ಷಣಂ ಎಂದು ಭಾಟ್ಟರು ಹೇಳುವ ಲಕ್ಷಣವನ್ನೇ ಮಾಯಾವಾದಿಯು ಸ್ವೀಕರಿಸಿದ್ದರಿಂದ ಪ್ರಕೃತದಲ್ಲಿ ಸಿದ್ಧವಾದ ಐಕ್ಯಪ್ರತಿಪಾದಕ ಶಾಸ್ತ್ರವು ಅಧಿಗತಾರ್ಥ ಗಂತೃ (ಜ್ಞಾತಾರ್ಥ ವಿಷಯಕ ಜ್ಞಾನಜನಕವೇ) ಆಗುತ್ತದೆ ವಿನಹ ಅನಧಿಗತಾರ್ಥಗಂತೃತ್ವವು ಆಗುವುದಿಲ್ಲ. ಆಗ ಅನಧಿಗತಾರ್ಥಗಂತೃತ್ವಂ ಎಂಬ ಪ್ರಾಮಾಣ್ಯವು ಶಾಸ್ತ್ರದಲ್ಲಿ ಇಲ್ಲ. ಆದ್ದರಿಂದ ಮಾಯಾವಾದಿ ಶಾಸ್ತ್ರಕ್ಕೆ ಅನಾರಂಭಣೀಯತ್ವವು ಬರುತ್ತದೆ. ವೇದಾದಿ ಶಾಸ್ತ್ರಗಳಿಗೆ ಅನಾರಂಭಣೀಯತ್ವವು ಬರುವ ಪ್ರಸಂಗಇರುತ್ತದೆ.

[**ಟೀಕಾ:—** ಏವಮಯಥಾರ್ಥಪರತ್ವಮನ್ಯಥಾ ಪ್ರತಿಪದಾಕತ್ವಮಿತ್ಯಭಿಪ್ರೇತ್ಯೋಪಪಾದಿತಮ್ । ಅಧುನಾ ವಿಷಯ ಪ್ರಯೋಜನಾದಿರಹಿತತ್ವಮನ್ಯಥಾಪ್ರತಿಪಾದಕತ್ವಮಭಿಪ್ರೇತ್ಯ ತತ್ಸಿದ್ಧ್ಯರ್ಥಂ ಪರಾಭಿಮತಂ ಶಾಸ್ತ್ರಸ್ಯ ವಿಷಯಾದಿಕಂ ಪರನ್ಯಾಯೇನ ಅಪಾಕರೋತಿ—]

**ಪ್ರತಿಪದಾರ್ಥ :—** ಏವಂ=ಈ ರೀತಿಯಾಗಿ, ಅನ್ಯಥಾ ಪ್ರತಿಪಾದಕತ್ವಂ=ಅನ್ಯಥಾಪ್ರತಿಪಾದಕತ್ವವು ಎಂದರೆ. ಅಯಥಾರ್ಥಪರತ್ವಂ=ಅಯಥಾರ್ಥ ಜ್ಞಾನಜನಕತ್ವವು ಎಂದು, ಅಭಿಪ್ರೇತ್ಯ = ಇಟ್ಟುಕೊಂಡು ಅನಾರಂಭಣೀಯತ್ವವು, ಉಪಪಾದಿತಮ್=ಉಪಪಾದಿಸಲ್ಪಟ್ಟಿತು, ಅಧುನಾ=ಈಗ ಅನ್ಯಥಾಪ್ರತಿಪಾದಕತ್ವಂ=ಅನ್ಯಥಾ ಪ್ರತಿಪಾದಕತ್ವವು ಎಂದರೆ, ವಿಷಯ ಪ್ರಯೋಜನಾದಿ=ವಿಷಯ ಪ್ರಯೋಜನ ಇವೇ ಮೊದಲಾಗಿವುಳ್ಳಂತಹ ಅಧಿಕಾರಿ ಮತ್ತು ಸಂಬಂಧಗಳಿಂದ ರಹಿತತ್ವಂ=ಇಲ್ಲದಿರುದಿಕೆಯು ಎಂಬ ಅರ್ಥವನ್ನು. ಅಭಿಪ್ರೇತ್ಯ=ಅಭಿಪ್ರಾಯವನ್ನಾಗಿ ಇಟ್ಟುಕೊಂಡು, ತತ್=ಆ ವಿಷಯ ಪ್ರಯೋಜನಾದ್ಯಭಾವದ ಸಿದ್ಧ್ಯರ್ಥಂ=ಸಿದ್ಧಿಯಾಗುವುದಕ್ಕೋಸ್ಕರ, ಶಾಸ್ತ್ರಸ್ಯ ಶಾಸ್ತ್ರಕ್ಕೆ, ಪರಾಭಿಮತಂ=ಮಾಯಾವಾದಿಗೆ ಸಮ್ಮತವಾದಂತಹ. ವಿಷಯಾದಿಕಂ=ವಿಷಯಾದಿಗಳನ್ನು ಪರನ್ಯಾಯೇನ=ಮಾಯಾವಾದಿಯ ಯುಕ್ತಿಯಿಂದಲೆ, ಅಪಾಕರೋತಿ=ಖಂಡಿಸುತ್ತಿದ್ದಾರೆ.

**ಭಾವಾರ್ಥ :—** ಈ ರೀತಿಯಾಗಿ ಅನ್ಯಥಾ ಪ್ರತಿಪಾದಕತ್ವಂ ಎನ್ನುವುದಕ್ಕೆ ಅಯಥಾರ್ಥ ಪ್ರತಿಪಾದಕತ್ವಂ ಎಂಬ ಅರ್ಥವನ್ನು ಇಟ್ಟು ಕೊಂಡು ಅನಾರಂಭಣೀಯತ್ವದ ಉಪಪಾದನವನ್ನು ಮಾಡಿ ಈಗ ಅದೇ ಅನ್ಯಥಾ ಪ್ರತಿಪಾದಕ ತ್ವಂ ಎನ್ನುವುದಕ್ಕೆ ವಿಷಯಪ್ರಯೋಜನಾದಿ ರಹಿತತ್ವಂ ಎಂದರೆ ವಿಷಯಪ್ರಯೋಜನಾಧಿಕಾರಿ ಸಂಬಂಧ ಶೂನ್ಯತ್ವಂ ಎಂಬ ಅರ್ಥವನ್ನು ಇಟ್ಟುಕೊಂಡು ಅನುಬಂಧ ಚತುಷ್ಟಯಾಭಾವಾತ್ ಅನಾರಂಭಣೀಯಂ ಎಂದು ಸಮರ್ಥಿಸುವ ಉದ್ದೇಶದಿಂದ ಮಾಯಾವಾದಿಯು ಯಾವ ವಿಷಯ ಪ್ರಯೋಜನಾದಿಗಳು ಶಾಸ್ತ್ರಕ್ಕೆ ಉಂಟು ಎಂದು ಹೇಳು ತ್ತಾನೋ ಅವುಗಳು ಆ ಮಾಯಾವಾದಿ ಮತ ರೀತ್ಯಾ ಇಲ್ಲ ಎಂದು ತಿಳಿಸಲು ಅವನು ಹೇಳುವ ವಿಷಯ ಪ್ರಯೋಜ ನಾದಿಗಳನ್ನು ಖಂಡನ ಮಾಡುತ್ತಿದ್ದಾರೆ ಶ್ರೀಮದಾಚಾರ್ಯರು.

**ಮೂಲ :** "ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಮ್"

**ಪ್ರತಿಪದಾರ್ಥ:-** ಅಜ್ಞಾನಾಸಂಭವಾದೇವ=ಅಜ್ಞಾನವೆಂಬ ಪದಾರ್ಥವೇ ಮಾಯಾವಾದಿಯ ಮತರೀತ್ಯಾ ಯುಕ್ತವಲ್ಲ ವಾದ್ದರಿಂದ, ತನ್ಮತಂ=ತತ್=ಮಾಯಾವಾದಿಯಿಂದ. ಮತಂ = ಅಭಿಪ್ರೇತವಾದಂತಹ, ಅಖಿಲಂ=ವಿಷಯ ಪ್ರಯೋಜನಾದಿ ಅನುಬಂಧ ಚತುಷ್ಟಯವು, ಅಪಾಕೃತಂ=ನಿರಾಕೃತವಾಯಿತು.

**ಭಾವಾರ್ಥ :—** ಮಾಯಾವಾದಿ ಮತರೀತ್ಯಾ ಅಜ್ಞಾನವೆಂಬ ಪದಾರ್ಥವೇ ಕೂಡುವುದಿಲ್ಲವಾದ್ದರಿಂದ ಮಾಯಾ ವಾದಿಗೆ ಸಂಮತವಾದಂತಹ ಅನುಬಂಧ ಚತುಷ್ಟಯವು ನಿರಾಕೃತವಾಗಿದೆ,

**ಟೀಕಾ :—** ತನ್ಮತಂ ತದಭಿಮತಮಖಿಲಂ ವಿಷಯಾದಿಕಮಪಾಕೃತಂ ವೇದಿತ್ಯವ್ಯಂ । ಕಥಂ ? ಉಕ್ತಪ್ರಕಾರೇಣೈವ ತನ್ಮತೇ ಅಜ್ಞಾನಾಸಂಭವಾ ದ್ವಿಷಯಾದೇಶ್ಚ ಅಜ್ಞಾನಸಾಪೇಕ್ಷತ್ವಾತ್ । ಅಜ್ಞಾತೋ ಹಿ ವಿಷಯೋಭವತಿ । ಅನ್ಯಥಾ ಅತಿಪ್ರಸಂಗಾತ್ । ಏವಮಜ್ಞಾನಾಸಂಭವೇನ ವಿಷಯಂ ನಿರಾಕೃತ್ಯ ಪ್ರಕಾರಾಂತೇಣ ನಿರಾಚಷ್ಟೇ ।

**ಪ್ರತಿಪದಾರ್ಥ : —** ತನ್ಮತಂ ತದಭಿಮತಂ=ಮೂಲದಲ್ಲಿರುವ 'ತನ್ಮತಂ' ಎಂಬ ಪದಕ್ಕೆ ತದಭಿಮತಂ ಎಂದರ್ಥ ಅಂದರೆ ಅವನಿಗೆ (ಮಾಯಾವಾದಿಗೆ) ಸಮ್ಮತವಾದದ್ದು ಎಂದರ್ಥ, ಅಖಿಲಂ=ಅಖಿಲ ಎಂಬ ಪದಕ್ಕೆ ವಿಷಯಾದಿಕಂ =ವಿಷಯ ಮತ್ತು ಆದಿಪದದಿಂದ ಪ್ರಯೋಜನಾಧಿಕಾರಿ ಸಂಬಂಧಗಳು ಎಂದು, ಅಪಾಕೃತಂ=ವಿಷಯಾದಿಗಳು ನಿರಾಕೃತವಾಗಿದೆ (ಎಂದು), ವೇದಿತವ್ಯಂ=ತಿಳಿಯಲು ಯೋಗ್ಯವಾಗಿದೆ, ಕಥಂ=ಹೇಗೆ? ಉಕ್ತಪ್ರಕಾರೇಣೈವ =ಮೇಲೆ ಹೇಳಲ್ಪಟ್ಟಂತಹ ರೀತಿಯಿಂದಲೆ, ತನ್ಮತೇ=ಆ ಮಾಯಾವಾದಿ ಮತದಲ್ಲಿ, ಅಜ್ಞಾನಾ ಸಂಭವಾತ್= ಅಜ್ಞಾನವು ಕೂಡುವುದಿಲ್ಲವಾದ್ದರಿಂದ, ವಿಷಯಾದೇಶ್ಚ=ವಿಷಯಾದಿಗಳಿಗೆ ಅಜ್ಞಾನಸಾಪೇಕ್ಷತ್ವಾತ್=ಅಜ್ಞಾನದ ಅಪೇಕ್ಷೆ ಇರುವುದರಿಂದ, ಅಜ್ಞಾತಃ = ಅಜ್ಞಾತವಾದಂಥಾದ್ದು, ವಿಷಯಃ=ವಿಷಯವು, ಭವತಿ ಆಗುತ್ತದೆ, ಹಿ=ನಿಶ್ಚಯವು, ಅನ್ಯಥಾ=ವಿಷಯವು ಅಜ್ಞಾತವಾಗಿರದಿದ್ದರೆ, ಅತಿಪ್ರಸಂಗಾತ್=ಅಪ್ರಾಮಾಣ್ಯವೇ ಮೊದ ಲಾದ ದೋಷಗಳು ಬರುವ ಪ್ರಸಂಗವಿರುತ್ತದೆ, ಏವಂ=ಈ ರೀತಿಯಾಗಿ, ಅಜ್ಞಾನಾಸಂಭವೇನ=ಅಜ್ಞಾನವೆಂಬ ಪದಾರ್ಥವೇ ಕೂಡಿಲ್ಲವಾದ್ದರಿಂದ, ವಿಷಯಂ=ವಿಷಯವನ್ನು, ನಿರಾಕೃತ್ಯ = ಖಂಡಿಸಿ, ಪ್ರಕಾರಾಂತೇಣ = ಇನ್ನೊಂದು ರೀತಿಯಿಂದ, ನಿರಾಚಷ್ಟೇ=ನಿರಾಕರಿಸುತ್ತಾರೆ.

**ಭಾವಾರ್ಥ :—** ಈಗಾಗಲೇ ವಿವರಿಸಿದಂತೆ ಮಾಯಾವಾದಿಯ ಮತದ ಪ್ರಕ್ರಿಯೆಗೆ ಅನುಗುಣವಾಗಿ ವಿಚಾರಿಸಿವರೂ ಸಹ "ಅಜ್ಞಾನ" ಎಂಬ ಪದಾರ್ಥವು ಯುಕ್ತವಾಗಿಲ್ಲವಾದ್ದರಿಂದ ಆ ಮಾಯಾವಾದಿಗೆ ಸಮ್ಮತವಾದ ವಿಷಯ, ಪ್ರಯೋಜನ ಅಧಿಕಾರಿ ಸಂಬಂಧಗಳೂ ಎಂಬ ಅನುಬಂಧಚತುಷ್ಟಯವು ಸಹ ಇಲ್ಲವೆಂದಾಯಿತು. ಏಕೆಂದರೆ—

ಈ ಅನುಬಂಧ ಚತುಷ್ಟಯಕ್ಕೆ ಅಜ್ಞಾನವೇ ಮೂಲವಾಗಿದೆ. ಅಂದರೆ ಅಜ್ಞಾನ ಎಂಬ ಪದಾರ್ಥವಿದ್ದರೇನೇ ಈ ಅನುಬಂಧ ಚತುಷ್ಟಯವು ಇರುತ್ತದೆ. ಉದಾಹರಣೆಗೆ ಸಕ್ಕರೆ ಗೊಂಬೆಗಳನ್ನು ಮಾಡಲು ಮೊದಲು ಸಕ್ಕರೆ ಬೇಕು. ಸಕ್ಕರೆಯೇ ಇಲ್ಲವೆಂದರೆ ಸಕ್ಕರೆ ಗೊಂಬೆ ಇಲ್ಲ ಎಂದು ಹೇಗೋ ಹಾಗೆ ಪ್ರಕೃತದಲ್ಲಿ ಇದೆ. ಅದು ಹೇಗೆ ಎಂದರೆ — ಶಾಸ್ತ್ರಕ್ಕೆ ವಿಷಯ ಎಂದಾಗಬೇಕಾದರೆ ಅದು ನಮಗೆ ಮೊದಲು ಅಜ್ಞಾತವಾಗಿರಬೇಕು. ಅಜ್ಞಾತವಾಗಿರ ದಿದ್ದರೆ, ಅಂದರೆ ಜ್ಞಾತವೇ ಆಗಿದ್ದರೆ ಅದನ್ನು ತಿಳಿಯಲು ನಾವು ಶಾಸ್ತ್ರವನ್ನು ಓದುವ ಅವಶ್ಯಕತೆಯೇ ಇಲ್ಲ. ಆಗ ಶಾಸ್ತ್ರಕ್ಕೆ ವೈಮರ್ಥ್ಯ. ಅಪ್ರಾಮಾಣ್ಯ ಮೊದಲಾದ ದೋಷಗಳು ಬರುವವು. ಅವುಗಳನ್ನು ಪರಿಹರಿಸಲು ವಿಷಯವು ಅಜ್ಞಾತವಾಗಿದೆ ಎಂದು ಹೇಳಬೇಕು. ಹೀಗೆ 'ಅಜ್ಞಾತ' ಎಂದು ಹೇಳುವಾಗ ಮೊದಲು ಅಜ್ಞಾನವನ್ನು ಒಪ್ಪಬೇಕು. ಏಕೆಂದರೆ ಅಜ್ಞಾತ ಎಂದರೆ ಅಜ್ಞಾನಕ್ಕೆ ವಿಷಯ. ಮೇಲೆ ಹೇಳಿದಂತೆ ಅಜ್ಞಾನವೇ ಇಲ್ಲವೆಂದರೆ ಅಜ್ಞಾತ ಎಂಬ ವಿಷಯ ಹೇಗೆ ಸರಿಯಾಗುತ್ತದೆ. ಹೀಗೆ ಮಾಯಾವಾದಿ ಮತರೀತ್ಯಾ ವಿಷಯವು ಶಾಸ್ತ್ರಕ್ಕೆ ಇಲ್ಲ ಎಂದು ಒಂದು ರೀತಿಯಿಂದ ಸಮರ್ಥಿಸಿ ಇನ್ನೊಂದು ರೀತಿಯಿಂದ ಸಮರ್ಥಿಸುತ್ತಾರೆ.

**ಮೂಲ :**—"ಮಿಥ್ಯಾತ್ವೇಚೈಕ್ಯಸ್ಯ ಅತತ್ತ್ವಾವೇದಕತ್ವಮಾಗಮಸ್ಯ ಸ್ಯಾತ್"

**ಪ್ರತಿಪದಾರ್ಥ :—** ಐಕ್ಯಸ್ಯ ಮಿಥ್ಯಾತ್ವೇ = ಐಕ್ಯವು ಸುಳ್ಳು ಎಂದು ಆಗುತ್ತಿರಲು (ಅಂತಹ ಐಕ್ಯವನ್ನು ಹೇಳುವಂತಹ) ಆಗಮಸ್ಯ = ಆಗಮಕ್ಕೆ, ಅತತ್ತ್ವಾವೇದಕತ್ವಂ = ಅಯತಾರ್ಥ ಜ್ಞಾನಜನಕತ್ವವು, ಸ್ಯಾತ್ = ಆಗಲಿ.

**ಭಾವಾರ್ಥ:—** ಮಾಯಾವಾದಿ ಮತಾನುಸಾರವಾಗಿ ಐಕ್ಯವು ಮಿಥ್ಯಾ ಎಂದು ಹೇಳಬೇಕಾಗುತ್ತದೆ, ಆಗ ಅಂತಹ ಮಿಥ್ಯಾಭೂತ ಐಕ್ಯವನ್ನು ಹೇಳಿದರೆ ಶಾಸ್ತ್ರಕ್ಕೆ ಅತತ್ತ್ವಾವೇದಕತ್ವವು ಬರುತ್ತದೆ.

[**ಟೀಕಾ :**= ಐಕ್ಯಂ ಹಿ ಶಾಸ್ತ್ರಸ್ಯ ವಿಷಯತಯಾ ಪರಸ್ಯಾಭಿ ಮತಮ್ । ತತ್ಕಿಮಾತ್ಮಸ್ವರೂಪಾತಿರಿಕ್ತಮ್ ? ಉತ್ ತನ್ಮಾತ್ರಮ್ ? ಆದ್ಯೇಽಹಿ ಸತ್ಯಂ ಮಿಥ್ಯಾವಾ ? ನಾದ್ಯಃ ಅದ್ವೈತಹಾನಿಪ್ರಸಂಗಾತ್ । ನ ದ್ವಿತೀಯಃ । ಐಕ್ಯಸ್ಯ ಮಿಥ್ಯಾತ್ವೇ ತತ್ಪ್ರತಿಪಾದಕಸ್ಯ ಶಾಸ್ತ್ರಸ್ಯ ಅತತ್ತ್ವಾವೇದಕತ್ವಂ ಸ್ಯಾತ್ । ತಥಾ ಚಾಪಸಿದ್ಧಾಂತಃ ಸ್ಯಾತ್ । ಕಿಂ ಚ—

**ಪ್ರತಿಪದಾರ್ಥ :—** ಐಕ್ಯಂ ಐಕ್ಯವು, ಶಾಸ್ತ್ರಸ್ಯ = ಶಾಸ್ತ್ರಕ್ಕೆ, ವಿಷಯತಯಾ = ವಿಷಯ ಎಂದು, ಪರಸ್ಯ = ಮಾಯಾ ವಾದಿಗೆ ಅಭಿಮತಂ ಹಿ = ನಿಶ್ಚಯವಾಗಿದೆ. ತತ್ = ಆ ಐಕ್ಯವು, ಆತ್ಮಸ್ವರೂಪಾರಿಕ್ತಂ ಕಿಮ್? = ಬ್ರಹ್ಮಸ್ವರೂಪನ ದೆಸೆಯಿಂತ ಭಿನ್ನವಾಗಿದೆಯೋ ? ಉತ = ಅಥವಾ, ತನ್ಮಾತ್ರಂ ಕಿಮ್ = ಬ್ರಹ್ಮಸ್ವರೂಪವೇ ಆಗಿದೆಯೋ ? ಆದ್ಯೇ = ಬ್ರಹ್ಮಸ್ವರೂಪನ ದೆಸೆಯಿಂದ ಭಿನ್ನವಾಗಿದೆ ಎಂಬ ಮೊದಲನೆ ಪಕ್ಷದಲ್ಲಿ, ಸತ್ಯಂ = ಸತ್ಯವಾಗಿದೆಯೋ, ವಾ = ಅಥವಾ, ಮಿಥ್ಯಾ = ಸುಳ್ಳಾಗಿರುವುದೊ ? ನಾದ್ಯಃ = ಐಕ್ಯವು ಬ್ರಹ್ಮಭಿನ್ನವಾಗಿದ್ದು ಸತ್ಯವಾಗಿದೆ ಎಂಬ ಪ್ರಸಕ್ತಿ ಬಂದರೆ ಅದು ಕೂಡುವುದಿಲ್ಲ. (ಏಕೆಂದರೆ) ಅದ್ವೈತಹಾನಿ ಪ್ರಸಂಗಾತ್ = ಅದ್ವೈತದ ಹಾನಿಯಾಗುವುದರಿಂದ. ನ ದ್ವಿತೀಯಃ = ಎರಡನೆಯ ಪಕ್ಷವೂ ಕೂಡುವುದಿಲ್ಲ (ಏಕೆಂದರೆ), ಐಕ್ಯಸ್ಯ = ಐಕ್ಯಕ್ಕೆ, ಮಿಥ್ಯಾತ್ವೇ = ಮಿಥ್ಯಾತ್ವವು ಬಂದರೆ, ತತ್ಪ್ರತಿಪಾದಕಸ್ಯ = ಅಂತಹ ಮಿಥ್ಯಾಭೂತ ಐಕ್ಯವನ್ನು ಪ್ರತಿಪಾದನ ಮಾಡುವಂತಹ, ಶಾಸ್ತ್ರಸ್ಯ = ಶಾಸ್ತ್ರಕ್ಕೆ ಅತತ್ತ್ವಾವೇದಕತ್ವಂ = ಅಯಥಾರ್ಥಜ್ಞಾನ ಜನಕತ್ವವು, ಸ್ಯಾತ್ = ಆಗಬೇಕಾದೀತು. ತಥಾ ಚ ಹಾಗೆ ಅತತ್ತ್ವಾ ವೇದಕತ್ವವನ್ನು ಅಂಗೀಕರಿಸಿದರೆ ಅಪಸಿದ್ಧಾಂತವು ಬರುತ್ತದೆ. ಕಿಂ ಚ = ಇನ್ನೊಂದು ದೋಷವೇನೆಂದರೆ—

**ಭಾವಾರ್ಥ :—** ಐಕ್ಯವು ಶಾಸ್ತ್ರಕ್ಕೆ ವಿಷಯ ಎಂದು ಮಾಯಾವಾದಿಗೆ ಸಮ್ಮತವಾಗಿದೆ. ಈ ಐಕ್ಯವು ಬ್ರಹ್ಮನ ದೆಸೆಯಿಂದ ಭಿನ್ನವೋ ಅಥವಾ ಅಭಿನ್ನವೋ ಎಂಬ ಪ್ರಶ್ನೆಯು ಬರುತ್ತದೆ. ಐಕ್ಯವು ಬ್ರಹ್ಮನ ದೆಸೆಯಿಂದ ಭಿನ್ನವಾಗಿದೆ

ಎಂದು ಅಂಗೀಕರಿಸಿದರೆ ಬ್ರಹ್ಮಭಿನ್ನವಾದ ಐಕ್ಯವು ಸತ್ಯವೋ ಮಿಥ್ಯಾವೋ ಎಂಬ ಪ್ರಶ್ನೆ ಬರುತ್ತದೆ. ಸತ್ಯ ಎಂದು ಅಂಗೀಕರಿಸಲು ಬರುವುದಿಲ್ಲ. ಏಕೆಂದರೆ ಬ್ರಹ್ಮ ಒಂದೇ ಸತ್ಯ ಎಂಬ ಮತದಲ್ಲಿ ಬ್ರಹ್ಮಭಿನ್ನವಾದ ಐಕ್ಯವೂ ಸತ್ಯ ಎಂದರೆ ಬ್ರಹ್ಮ ಒಂದೇ ಸತ್ಯ ಎಂಬ ಅದ್ವೈತ ವಾದವನ್ನು ಕೈಬಿಟ್ಟಂತಾಯಿತು. ಇನ್ನು ಬ್ರಹ್ಮಭಿನ್ನವಾಗಿ ಆ ಐಕ್ಯವು ಮಿಥ್ಯಾ ಎಂದಾದರೆ ಅಂತಹ ಮಿಥ್ಯಾಭೂತ ಅರ್ಥಪ್ರತಿಪಾದಕತ್ವವು ಶಾಸ್ತ್ರಕ್ಕೆ ಬರುವುದರಿಂದ ಶಾಸ್ತ್ರ ಅತತ್ವಾವೇದವು ಎಂದು ಆಗಬೇಕಾಗುತ್ತದೆ. ಆಗಲಿ ಎಂದರೆ ಪೂರ್ವಾಚಾರ್ಯರು ಶಾಸ್ತ್ರಕ್ಕೆ ಅತತ್ವಾವೇದಕತ್ವವನ್ನು ಅಂಗೀಕರಿಸಿಲ್ಲವಾದ್ದರಿಂದ ಅಪಸಿದ್ಧಾಂತ ಎಂಬ ದೋಷವು ಬರುತ್ತದೆ. ಈ ಅಪಸಿದ್ಧಾಂತವು ಬರುವುದಲ್ಲದೆ ಮತ್ತೊಂದು ದೋಷವೇನೆಂದರೆ ಶ್ರೀಮದಾಚಾರ್ಯರು ಅದನ್ನು ತಿಳಿಸುತ್ತಾರೆ—

**ಮೂಲ:—** " ಸತ್ಯತಾ ಚ ಭೇದಸ್ಯ "

ಚ=ಮತ್ತು, ಭೇದಸ್ಯ=ಭೇದಕ್ಕೆ. ಸತ್ಯತಾ=ಸತ್ವವು ಬರುತ್ತದೆ.

**ಭಾವಾರ್ಥ:—** ಐಕ್ಯವು ಬ್ರಹ್ಮಭಿನ್ನವಾಗಿ ಮಿಥ್ಯಾ ಎಂದಾದರೆ ಅಪಸಿದ್ಧಾಂತವು ಬರುತ್ತದೆ. ಮತ್ತು ಭೇದಕೆ ಸತ್ಯತ್ವವು ಸಿದ್ಧವಾಗುತ್ತದೆ.

**ಟೀಕಾ:—** ಪರಸ್ಪರ ವಿರುದ್ಧಯೋರನ್ಯತರ ನಿಷೇಧಸ್ಯ ಅನ್ಯತರ ವಿಧಿವ್ಯಾಪ್ತತ್ವಾದೈಕ್ಯಸ್ಯ ಮಿಥ್ಯಾತ್ವೇ ಭೇದಸ್ಯ ಸತ್ಯತಾ ಚ ಸ್ಯಾತ್ ಅತ । ಐಕ್ಯಮಾತ್ಮಸ್ವರೂಪಮೇತ್ಯಂಗೀಕಾರ್ಯಮ್ । ಸ್ವರೂಪಸ್ಯ ಚ ಸ್ವಪ್ರಕಾಶತ್ವೇನ ನ ವಿಷಯತಾ ಸಂಭವತೀತಿ ।

**ಪ್ರತಿಪದಾರ್ಥ:—** ಪರಸ್ಪರ ವಿರುದ್ಧಯೋಃ ಪರಸ್ಪರವಾಗಿ ವಿರುದ್ಧವಾದ ಎರಡು ಧರ್ಮಗಳ ಮಧ್ಯದಲ್ಲಿ ಅನ್ಯತರ ನಿಷೇಧಸ್ಯ=ಒಂದು ಧರ್ಮದ ಅಭಾವಕ್ಕೆ, ಅನ್ಯತರ ವಿಧಿವ್ಯಾಪ್ತತ್ವಾತ್=ಇನ್ನೊಂದರ ಸತ್ವದಿಂದ ವ್ಯಾಪಿಯಿರುವುದರಿಂದ (ಐಕ್ಯ ಮತ್ತು ಭೇದಗಳು ಪರಸ್ಪರ ವಿರುದ್ಧವಿದ್ದು ಇವುಗಳ ಮಧ್ಯದಲ್ಲಿ) ಐಕ್ಯಸ್ಯ=ಐಕ್ಯಕ್ಕೆ ಮಿಥ್ಯಾತ್ವೇ=ಮಿಥ್ಯಾತ್ವವು ಬಂದರೆ, ಭೇದಸ್ಯ=ಭೇದಕ್ಕೆ, ಸತ್ಯತಾ=ಸತ್ವವು, ಸ್ಯಾತ್=ಬರುತ್ತದೆ. ಅತಃ= ಆದ್ದರಿಂದ, ಐಕ್ಯಂ=ಐಕ್ಯವು, ಆತ್ಮಸ್ವರೂಪಮ್ ಏವ=ಆತ್ಮಸ್ವರೂಪವೇ ಆಗಿದೆ, ಇತಿ=ಇಂತೆಂದು, ಅಂಗೀಕಾರ್ಯಂ=ಸ್ವೀಕರಿಸತಕ್ಕದ್ದು. ಸ್ವರೂಪಸ್ಯ ಚ=ಸ್ವರೂಪಕ್ಕೆ ಸ್ವಪ್ರಕಾಶತ್ವೇನ=ಸ್ವಪ್ರಕಾಶತ್ವವಿರುವುದರಿಂದ, ವಿಷಯತಾ=ಶಾಸ್ತ್ರ ವಿಷಯತ್ವವೂ, ನ ಸಂಭವತಿ=ಕೂಡುವುದಿಲ್ಲ, ಇತಿ=ಹೀಗೆ ದೋಷವು,

**ಭಾವಾರ್ಥ:—** ಬ್ರಹ್ಮಭಿನ್ನವಾಗಿ ಆ ಐಕ್ಯವು ಮಿಥ್ಯಾ ಎಂದರೆ ಹಿಂದೆ ಹೇಳಿದ ರೀತಿಯಲ್ಲಿ ಅಪಸಿದ್ಧಾಂತವು ಬರುತ್ತದೆ ಮತ್ತು ಭೇದಕ್ಕೆ ಸತ್ಯತ್ವವು ಸಿದ್ಧವಾಗುತ್ತದೆ. ಏಕೆಂದರೆ ಯಾವುದೇ ಒಂದು ಪದಾರ್ಥದಲ್ಲಿ ಇರಲು ಯೋಗ್ಯವಾದ ಮತ್ತು ಪರಸ್ಪರ ವಿರುದ್ಧವಾದ ಎಂದು ಧರ್ಮಗಳ ಮಧ್ಯದಲ್ಲಿ ಒಂದು ಧರ್ಮವಿಲ್ಲ ಎಂದರೆ ಇನ್ನೊಂದು ಧರ್ಮ ಉಂಟು ಎಂದು ಸಿದ್ಧವಾಗುತ್ತದೆ. ಅಂದರೆ ಒಂದರ ಅಭಾವವು ಇನ್ನೊಂದರ ಸತ್ವದಿಂದ ವ್ಯಾಪ್ತವಾಗಿದೆ. ಪ್ರಕೃತ ಐಕ್ಯ ಮತ್ತು ಭೇದಗಳು ಪರಸ್ಪರ ವಿರುದ್ಧವಾಗಿವೆ. ಇದರಲ್ಲಿ ಐಕ್ಯ ಮಿಥ್ಯಾ ಎಂದರೆ ಐಕ್ಯವಿಲ್ಲ ಎಂದು ಹೇಳಿದರೆ ಐಕ್ಯಕ್ಕೆ ವಿರುದ್ಧವಾದ ಭೇದವು ಸತ್ಯವೆಂದು ಅಂಗೀಕಾರ ಮಾಡಲೇಬೇಕು. ಹೀಗೆ ಭೇದ ಸತ್ಯವೆಂದರೆ ನನಗೆ ಅಪಸಿದ್ಧಾಂತವು ಬರುತ್ತದೆ. ಅದನ್ನು ಪರಿಹರಿಸಲು ಐಕ್ಯವನ್ನು ಸತ್ಯ ಎಂದು ಹೇಳಬೇಕು. ಆಗಲೂ ಕೂಡ ಸತ್ಯ ಎಂದು ಹೇಳಿ ಆತ್ಮಭಿನ್ನ ಎಂದರೆ ಪುನಃ ಸತ್ಯ ವಸ್ತುದ್ವಯವನ್ನು ಅಂಗೀಕರಿಸಿದರೆ ಅಪಸಿದ್ಧಾಂತ ಮತ್ತು ಅದ್ವೈತ ಹಾನಿ ಬರುತ್ತದೆ. ಅದನ್ನು ಪರಿಹರಿಸಲು ಈ ಐಕ್ಯವು ಆತ್ಮಾಭಿನ್ನವಾಗಿದೆ ಎಂದು ಅಂಗೀಕರಿಸಬೇಕು. ಆಗ ಆತ್ಮವು ಸ್ವಪ್ರಕಾಶವಾದ್ದರಿಂದ ಆತ್ಮಾಭಿನ್ನವಾದ ಐಕ್ಯವೂ ಸಹ ಸ್ವಪ್ರಕಾಶ ಎಂದು ಹೇಳಲೇಬೇಕು. ಸ್ವಪ್ರಕಾಶವಾದ್ದರಿಂದ

ಅವೇದ್ಯತ್ವಂ ಸ್ವಪ್ರಕಾಶತ್ವಂ ಎಂಬ ನಿನ್ನ ಪರಿಷ್ಕಾರಕ್ಕನುಸರಿಸಿ ಐಕ್ಯವು ಶಾಸ್ತ್ರಕ್ಕೆ ವಿಷಯವಲ್ಲ ಎಂದು ಹೇಳಲೇಬೇಕು. ಆದ್ದರಿಂದ ಶಾಸ್ತ್ರಕ್ಕೆ ಐಕ್ಯ ವಿಷಯವಲ್ಲ, ಶಾಸ್ತ್ರಕ್ಕೆ ಬೇರೆ ವಿಷಯವಲ್ಲ ಎಂದು ಶಾಸ್ತ್ರಕ್ಕೆ ನಿರ್ವಿಷಯತ್ವವು ಬರುವುದರಿಂದ ಶಾಸ್ತ್ರಕ್ಕೆ ಅನಾರಂಭಣೀಯತ್ವವನ್ನು ಹೇಳಬೇಕಾಗುತ್ತದೆ.

ಈ ಮೇಲೆ ಹೇಳಿದ ವಿಷಯವು ಹಿಂದೆಯೇ ಬಂದದ್ದರಿಂದ ಈಗ ಅದನ್ನೇ ಹೇಳಿದರೆ ಪುನರುಕ್ತಿ ದೋಷ ಬರುವುದಿಲ್ಲವೇ ಎಂಬ ಶಂಕೆ ಬಂದರೆ ಹಿಂದೆ ಹೇಳಿದ್ದಕ್ಕೂ ಈಗ ಹೇಳುತ್ತಿರುವ ವಿಷಯಕ್ಕೂ ವ್ಯತ್ಯಾಸವೇನೆಂಬುದನ್ನು ಶ್ರೀಮಟ್ಟೀಕಾಕೃತ್ಪಾದರು ತಿಳಿಸುತ್ತಿದ್ದಾರೆ 'ಪೂರ್ವಂ' ಎಂಬ ಮುಂದಿನ ಗ್ರಂಥದಿಂದ—

[**ಟೀಕಾ :—** ಪೂರ್ವಮನತಿರೇಕಪಕ್ಷಪ್ರತಿಷೇಧೇನ ಅತಿರೇಕಪಕ್ಷಮಂಗೀಕಾರ್ಯ ಅಯಥಾರ್ಥ ಪ್ರತಿಪಾದಕತ್ವಂ ಸಮರ್ಥಿತಮ್ । ಇದಾನೀಂತು ತದ್ವಿಪರ್ಯಯೇಣ ವಿಷಯತ್ವಾಭಾವಸಮರ್ಥನಮಿತಿ ಭೇದಃ ।]

**ಪ್ರತಿಪದಾರ್ಥ :—** ಪೂರ್ವಂ= ಈ ಮೊದಲು, ಅನತಿರೇಕಪಕ್ಷಪ್ರತಿಷೇಧೇನ=ಅನತಿರೇಕ = ಐಕ್ಯವು ಬ್ರಹ್ಮನ ದೆಸೆಯಿಂದ ಅಭಿನ್ನ ಎಂಬ, ಪಕ್ಷ=ವಿಕಲ್ಪದ, (ಪ್ರಶ್ನೆಯ) ಪ್ರತಿಷೇಧೇನ=ಖಂಡನ ಪೂರ್ವಕವಾಗಿ, ಅತಿರೇಕಪಕ್ಷಮಂಗೀಕಾರ್ಯಂ=ಅತಿರೇಕ=ಐಕ್ಯವು ಬ್ರಹ್ಮಭಿನ್ನ ಎಂಬ, ಪಕ್ಷಂ=ಪಕ್ಷವನ್ನು, ಅಂಗೀಕಾರ್ಯ=ಅಂಗೀಕರಿಸಿ, ಅಯಥಾರ್ಥ ಪ್ರತಿಪಾದಕತ್ವಂ (ಶಾಸ್ತ್ರಕ್ಕೆ) ಅಯಥಾರ್ಥ ಜ್ಞಾನಜನಕತ್ವವು, ಸಮರ್ಥಿತಮ್=ಸಮರ್ಥಿಸಲ್ಪಟ್ಟಿದೆ. ಇದಾನೀಂ ತು=ಈಗ ಮಾತ್ರ, ತದ್ವಿಪರ್ಯಯೇಣ = ಅದಕ್ಕೆ ವಿರುದ್ಧವಾಗಿ (ಐಕ್ಯವು ಆತ್ಮನ ದೆಸೆಯಿಂದ ಭಿನ್ನ ಎಂಬ ಪಕ್ಷವನ್ನು ಖಂಡಿಸಿ ಆತ್ಮನ ದೆಸೆಯಿಂದ ಅಭಿನ್ನ ಎಂಬ ಪಕ್ಷವನ್ನು ಅಂಗೀಕರಿಸಿ), ವಿಷಯತ್ವಾಭಾವ= (ಆ ಐಕ್ಯಕ್ಕೆ) ವಿಷಯತ್ವವು ಇಲ್ಲ ಎಂದು ಸಮರ್ಥನಮ್ = ಸಮರ್ಥಿಸಿದ್ದು, ಇತಿ=ಇಂತೆಂದು, ಭೇದಃ—(ಹಿಂದೆ ಹೇಳಿದ್ದಕ್ಕೂ ಈಗ ಹೇಳುತ್ತಿರುವುದಕ್ಕೂ) ಭೇದವು.

ಭಾವಾರ್ಥ :— ಐಕ್ಯವು ಬ್ರಹ್ಮಾಭಿನ್ನ ಎಂಬ ಪಕ್ಷವನ್ನು ಖಂಡಿಸಿ, ಭೇದವನ್ನು ಅಂಗೀಕರಿಸಿ ಬ್ರಹ್ಮಭಿನ್ನವಾದದ್ದು ಮಿಥ್ಯಾವಾಗುವುದರಿಂದ ಮಿಥ್ಯಾಭೂತ ಅರ್ಥಪ್ರತಿಪಾದಕತ್ವವು ಬರುತ್ತದೆ ಎಂದು ಸಮರ್ಥಿಸಿದರು, ಈಗ ಅದಕ್ಕೆ ವಿರುದ್ಧವಾಗಿ ಐಕ್ಯವು ಬ್ರಹ್ಮನ ದೆಸೆಯಿಂದ ಭಿನ್ನ ಎಂಬ ಪಕ್ಷವನ್ನು ಖಂಡಿಸಿ, ಅಭೇದವನ್ನು ಮಾಯಾವಾದಿಯು ಅಂಗೀಕರಿಸಬೇಕು ಎಂದು ಪ್ರತಿಪಾದಿಸಿ ಅಭೇದವನ್ನು ಅಂಗೀಕರಿಸಿದರೆ ಸ್ವಪ್ರಕಾಶವಾದ ಬ್ರಹ್ಮಾಭಿನ್ನವಾದ ಐಕ್ಯವೂ ಕೂಡ ಸ್ವಪ್ರಕಾಶವೇ ಆಗುವುದರಿಂದ ಆ ಐಕ್ಯಕ್ಕೆ ಶಾಸ್ತ್ರವಿಷಯತ್ವವೂ ಕೂಡುವುದಿಲ್ಲ ಎಂದು ಸಮರ್ಥಿಸಿದ್ದರಿಂದ ಈ ಗ್ರಂಥಕ್ಕೆ ಪುನರುಕ್ತಿ ದೋಷವಿಲ್ಲ ಎಂದು ಅಭಿಪ್ರಾಯ,

[**ಟೀಕಾ :—** ಏವಂ ವಿಷಯಂ ನಿರಾಕೃತ್ಯ ಪ್ರಯೋಜನಂ ನಿರಾಕರೋತಿ—

**ಪ್ರತಿಪದಾರ್ಥ :—** ಏವಂ ಈ ರೀತಿಯಾಗಿ, ವಿಷಯಂ=ವಿಷಯವನ್ನು ನಿರಾಕೃತ್ಯ=ನಿರಾಕರಣ ಮಾಡಿ. ಪ್ರಯೋಜನಂ = ಪ್ರಯೋಜನವನ್ನು ನಿರಾಕರೋತಿ = ನಿರಾಕರಣ ಮಾಡುತ್ತಾರೆ ಶ್ರೀಮದಾಚಾರ್ಯರು "ಏವಂ" ಎಂಬ ಮುಂದಿನ ಗ್ರಂಥದಿಂದ,

ಭಾವಾರ್ಥ :— ಮಾಯಾವಾದಿ ಮತದಲ್ಲಿ ಅಜ್ಞಾನವೇ ಕೂಡುವುದಿಲ್ಲವಾದ್ದರಿಂದ ಅಜ್ಞಾತವೆಂಬ ವಿಷಯವಿಲ್ಲ ಎಂಬುದನ್ನು ಮಾಯಾವಾದಿ ಶಾಸ್ತ್ರಕ್ಕೆ ವಿಷಯವನ್ನು ನಿರಾಕರಿಸಿ, ಹಾಗೆಯೇ ಅಜ್ಞಾನವು ಕೂಡುವುದಿಲ್ಲವಾದ್ದರಿಂದಲೇ ಅಜ್ಞಾನ ನಿವೃತ್ತಿ ಎಂಬ ಪ್ರಯೋಜನವೂ ಕೂಡುವುದಿಲ್ಲ.

[ಮೂಲ :— ಏವಂ ಪ್ರಯೋಜನಮಪಿ ನಿರಸ್ತಮ್ ।

**ಪ್ರತಿಪದಾರ್ಥ :—** ಏವಂ=ಇದರಂತೆಯೇ, ಪ್ರಯೋಜನಮಪಿ=ಪ್ರಯೋಜನವೂಸಹ, ನಿರಸ್ತಮ್=ನಿರಾಕರಣ ಮಾಡಲ್ಪಟ್ಟಿತು.

**ಟೀಕಾ :—** [ಯಥಾ ಅಜ್ಞಾನಾಸಂಭವಾದಜ್ಞಾತಸ್ಯ ವಿಷಯತ್ವಾಸಂಭವೋಽದ್ವೈತವಾದೇ ಏವಂ ಅಜ್ಞಾನಾಸಂಭವಾ ದೇವ ಶಾಸ್ತ್ರಸ್ಯ ಪ್ರಯೋಜನಮಪಿವೇದಿತವ್ಯಂ ।]

**ಪ್ರತಿಪದಾರ್ಥ :—** ಯಥಾ=ಹೇಗೆ, ಅದ್ವೈತವಾದೇ=ಅದ್ವೈತಮತದಲ್ಲಿ, ಅಜ್ಞಾನಾಸಂಭವಾತ್=ಅಜ್ಞಾನವು ಕೂಡುವುದಿಲ್ಲವಾದ್ದರಿಂದ, ಅಜ್ಞಾತಸ್ಯ=ಅಜ್ಞಾತವಾದಂತಹ, ವಿಷಯಸ್ಯ=ವಿಷಯದ, ಅಸಂಭವಃ=ಕೂಡದಿರು ವಿಕೆಯೋ, ಏವಮೇವ=ಅದರಂತೆಯೇ, ಅಜ್ಞಾನಾಸಂಭವಾದೇವ=ಅಜ್ಞಾನವು ಕೂಡುವುದಿಲ್ಲವಾದ್ದರಿಂದಲೇ, ಪ್ರಯೋಜನಮಪಿ=ಪ್ರಯೋಜನವು ಕೂಡ, ನಿರಸ್ತಮ್=ನಿರಾಕರಣ ಮಾಡಲ್ಪಟ್ಟಿತು(ಇಂತೆಂದು), ವೇದಿತವ್ಯಮ್ ತಿಳಿಯಲ್ಪಡತಕ್ಕದ್ದು.

**ಭಾವಾರ್ಥ :—** ಅದ್ವೈತಮತದಲ್ಲಿ ಅಜ್ಞಾನವೆಂಬ ಪದಾರ್ಥವನ್ನೇ ಉಪಪಾದನ ಮಾಡಲು ಬರುವುದಿಲ್ಲವಾದ್ದರಿಂದ ಅಜ್ಞಾತವೆಂಬ ವಿಷಯವಿಲ್ಲ. ಆದ್ದರಿಂದ ವಿಷಯಾಭಾವಾತ್ ಅನಾರಂಭಣೀಯತ್ವವು ಶಾಸ್ತ್ರಕ್ಕೆ ಬಂದೀತು ಎಂದು ಸಮರ್ಥಿಸಿದೆಯೋ ಅದರಂತೆಯೇ ಅಜ್ಞಾನವು ಯುಕ್ತವಾಗುವುದಿಲ್ಲವಾದ್ದರಿಂದಲೆ ಅಜ್ಞಾನನಿವೃತ್ತಿ ಎಂಬ ಪ್ರಯೋಜನವೂ ಕೂಡ ಮಾಯಾವಾದಿ ಶಾಸ್ತ್ರಕ್ಕೆ ಇಲ್ಲ ಎಂದು ತಿಳಿಯಬೇಕು ಅದು ಹೇಗೆಂಬುದನ್ನು ತಿಳಿಸುತ್ತಿದ್ದಾರೆ ಶ್ರೀಮಟ್ಟೀಕಾಕೃತ್ಪಾದರು ಮೋಕ್ಷೋ ಹಿ ಪ್ರಯೋಜನಮ್ ಎಂಬ ಗ್ರಂಥದಿಂದ.

**ಟೀಕಾ :—** [ಮೋಕ್ಷೋ ಹಿ ಪ್ರಯೋಜನಮ್ । ಸ ಚ ಅಜ್ಞಾನ ನಿವೃತ್ತಿರೂಪಮ್ । ಯದಾಹ—
"ಅವಿದ್ಯಾಸ್ತಮಯೋ ಮೋಕ್ಷಃ ಸಾ ಸಂಸಾರಃ ಹ್ಯುದಾಹೃತಃ" ಇತಿ ।
ನ ಚಾಜ್ಞಾನಾಸಂಭವೇ ತನ್ನಿವೃತ್ತಿರುಪಪದ್ಯತೇ । ]

**ಪ್ರತಿಪದಾರ್ಥ :—** ಮೋಕ್ಷಃ=(ಶಾಸ್ತ್ರಕ್ಕೆ) ಮೋಕ್ಷವು, ಪ್ರಯೋಜನಮ್=ಪ್ರಯೋಜನವು, ಹಿ=ನಿಶ್ಚಯವು, ಸ ಚ =ಆ ಮೋಕ್ಷವು, ಅಜ್ಞಾನ ನಿವೃತ್ತಿರೂಪಃ=ಅಜ್ಞಾನದ ನಾಶ ರೂಪವಾಗಿದೆ. ಯತ್=ಯಾವ ಅಜ್ಞಾನ ನಾಶವೇ ಮೋಕ್ಷ ಎನ್ನುವುದನ್ನು (ಮಾಯಾವಾದಿಯು) "ಅವಿದ್ಯಾ=ಅಜ್ಞಾನದ, ಅಸ್ತಮಯಃ=ನಾಶವು, ಮೋಕ್ಷಃ =ಮೋಕ್ಷವು. ಸಾ=ಆ ಅವಿದ್ಯಾವು (ಅವಿದ್ಯಾದ ಸಂಬಂಧವು), ಸಂಸಾರಃ=ಸಂಸಾರವು ಇತಿ=ಇಂತೆಂದು, ಉದಾ ಹೃತಃ=ಹೇಳಲ್ಪಟ್ಟಿದೆ, ಇತಿ=ಇಂತೆಂದು, ಆಹ=ಮಾಯಾವಾದಿಯು ಹೇಳಿದ್ದಾನೆ. ಅಜ್ಞಾನಾಸಂಭವೇ= ಅಜ್ಞಾನಕ್ಕೆ ಸಂಭವವಿಲ್ಲವಾದರೆ (ಅಜ್ಞಾನವು ಕೂಡದಿದ್ದರೆ), ತನ್ನಿವೃತ್ತಿಃ=ಆ ಅಜ್ಞಾನದ ನಿವೃತ್ತಿಯು ನ ಚ ಉಪಪದ್ಯತೇ=ಯುಕ್ತವಾಗುವುದಿಲ್ಲ.

**ಭಾವಾರ್ಥ :—** ಶಾಸ್ತ್ರಕ್ಕೆ ಮೋಕ್ಷವು ಪ್ರಯೋಜನವು. ಅಜ್ಞಾನ ನಿವೃತ್ತಿಯೇ ಮೋಕ್ಷ ಎಂದು ಮಾಯಾವಾದಿಯು "ಅವಿದ್ಯಾಸ್ತಮಯೋ ಮೋಕ್ಷ ಸಾ ಸಂಸಾರ ಉದಾಹೃತಃ" ಎಂಬ ಶ್ಲೋಕದಿಂದ ಹೇಳಿದ್ದಾನೆ. ಆದರಿಂದ ಅಜ್ಞಾನ ವೆಂಬ ಪದಾರ್ಥವಿದ್ದರೆ ಮಾತ್ರ ಅಜ್ಞಾನ ನಿವೃತ್ತಿ ಎಂಬ ಪ್ರಯೋಜನವು ಆಗಬಹುದು. ಹೇಗೆಂದರೆ ಘಟವೆಂಬ ಪದಾರ್ಥವು ಇರುವುದರಿಂದ ಘಟದ ನಾಶವು ಶಕ್ಯವಿದೆ. ಆದರೆ ಶಶವಿಷಾಣದ ನಾಶವು ಶಕ್ಯವಿಲ್ಲ. ಏಕೆಂದರೆ

ಶಶವಿಷಾಣವೆಂಬ ಪದಾರ್ಥವೇ ಇಲ್ಲ. ಅದರಂತೆಯೇ ಪ್ರಕೃತದಲ್ಲೂ ಅಜ್ಞಾನವೆಂಬ ಪದಾರ್ಥವಿದ್ದರೆ ಮಾತ್ರ ಅಜ್ಞಾನ ನಿವೃತ್ತಿ ಎಂಬ ಪ್ರಯೋಜನವಾಗಬಹುದು, ಮೇಲೆ ಹೇಳಿದಂತೆ ಮಾಯಾವಾದಿ ಮತದಲ್ಲಿ ಅಜ್ಞಾನವೇ ಅಯುಕ್ತವಾದ್ದರಿಂದ ಅಜ್ಞಾನ ನಿವೃತ್ತಿ ಎಂಬ ಪ್ರಯೋಜನ ಅತ್ಯಂತವಾಗಿ ಆಯುಕ್ತವಾಗಿದೆ,

**ಟೀಕಾ :—** [ನನ್ವೇತತ್ ಅಜ್ಞಾನಾಸಂಭವಾದೇವೇತ್ಯನೇನೈವ ಸಿದ್ಧಮ್ ತತ್ಕಿಮರ್ಥೋಽಯಂ ಗ್ರಂಥಃ ?
ಸತ್ಯಮ್ ತಥಾಪಿ ತಸ್ಯೈವ ಪ್ರಪಂಚೋಽಯಮಿತ್ಯದೋಷಃ ।
ಪ್ರಪಂಚನಂ ಚ ಪ್ರಕಾರಾಂತರೇಣ ಪ್ರಯೋಜನನಿರಾಸಪ್ರಸ್ತಾವಾಯೇತಿ ।

**ಪ್ರತಿಪದಾರ್ಥ :—** ಏತತ್ = ಈ ಮಾಯಾವಾದಿ ಶಾಸ್ತ್ರಕ್ಕೆ ಪ್ರಯೋಜನವಿಲ್ಲ ಎಂಬ ವಿಷಯವನ್ನು, ಅಜ್ಞಾನಾಸಂಭವಾದೇವ = ಇತ್ಯನೇನೈವ = ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಸ್ತಮ್ ಎಂಬ ಗ್ರಂಥದಿಂದಲೆ, ಸಿದ್ಧಂ = ಸಿದ್ಧವಾಗಿದೆ. ತತ್ = ಆದ್ದರಿಂದ, ಅಯಂ ಗ್ರಂಥಃ = ಏವಂ ಪ್ರಯೋಜನಮಪಿ ನಿರಸ್ತಮ್ ಎಂಬ ಗ್ರಂಥವು, ಕಿಮರ್ಥಂ = ಏತಕ್ಕೆ. ಸತ್ಯಂ = ಹೌದು, ತಥಾಪಿ = ಆದರೂ ಕೂಡ, ತಸ್ಯೈವ = ಅಜ್ಞಾನಾಸಂಭವದೇವ ತನ್ಮತಮಖಿಲಮಪಾಸ್ತಮ್ ಎಂಬ ಗ್ರಂಥಕ್ಕೇನೆ, ಅಯಂ = ಏವಂ ಪ್ರಯೋಜನಮಪಿ ನಿರಸ್ತಮ್ ಎಂಬ ಗ್ರಂಥವು, ಪ್ರಪಂಚಃ = ವಿಸ್ತಾರವಾದ ವ್ಯಾಖ್ಯಾನರೂಪವಾಗಿದೆ, ಇತಿ = ಈ ರೀತಿಯಾಗಿ ಇರುವುದರಿಂದ, ಅದೋಷಃ = ಪುನರುಕ್ತಿ ಎಂಬ ದೋಷವಿಲ್ಲ, ಪ್ರಪಂಚನಂ ಚ = ಈ ವಿಸ್ತಾರವೂ ಕೂಡ, ಪ್ರಕಾರಾಂತರೇಣ = ರೀತ್ಯಂತರದಿಂದ (ಮಾಯಾವಾದಿ ಶಾಸ್ತ್ರಕ್ಕೆ), ಪ್ರಯೋಜನನಿರಾಸಪ್ರಸ್ತಾವಾಯೇತಿ = ಪ್ರಯೋಜನ = ಪ್ರಯೋಜನದ, ನಿರಾಸ = ನಿರಾಕರಣದ, ಪ್ರಸ್ತಾವಾಯ = ಪ್ರಸಂಗವನ್ನು ತಂದುಕೊಡುವುದಕ್ಕೋಸ್ಕರವಾಗಿ, ಇತಿ = ಇಂತೆಂದು, (ಪ್ರಪಂಚನಂ = ವಿಸ್ತಾರ ಮಾಡಿದ್ದು).

**ಭಾವಾರ್ಥ :—** ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಸ್ತಮ್ ಎಂಬ ಗ್ರಂಥದಿಂದಲೆ ಮಾಯಾವಾದಿ ಶಾಸ್ತ್ರಕ್ಕೆ ವಿಷಯ ಪ್ರಯೋಜನಾಧಿಕಾರಿ ಸಂಬಂಧಗಳು ಇಲ್ಲ ಎಂದು ಶ್ರೀಮದಾಚಾರ್ಯರು ಹೇಳಿದ್ದಾರೆ. ಈಗ ಪುನಃ ಮಾಯಾವಾದಿ ಶಾಸ್ತ್ರಕ್ಕೆ ಪ್ರಯೋಜನವಿಲ್ಲ ಎಂದು ಹೇಳುವ "ಏವಂ ಪ್ರಯೋಜನಮಪಿ ನಿರಸ್ತಮ್ ಎಂಬ ವಾಕ್ಯಕ್ಕೆ ಏನು ಪ್ರಯೋಜನ ಎಂದು ಪ್ರಶ್ನೆ ಬಂದರೆ ಅದಕ್ಕೆ ಉತ್ತರವೇನೆಂದರೆ ಶ್ರೀ ಮದಾಚಾರ್ಯರು ಹಿಂದೆ ಹೇಳಿದ ವಿಷಯವನ್ನೇ "ಏವಂ ಪ್ರಯೋಜನಮಪಿ ನಿರಸ್ತಮ್" ಎಂಬ ಗ್ರಂಥದಿಂದ ಇಲ್ಲಿ ವಿಸ್ತಾರ ಮಾಡುತ್ತಿದ್ದಾರಾದ್ದರಿಂದ ಈ ಗ್ರಂಥಕ್ಕೆ ವೈಯರ್ಥ್ಯವಿಲ್ಲ. ಹೀಗೆ ವಿಸ್ತರವನ್ನಾದರೂ ಮಾಡುವ ಉದ್ದೇಶವೇನೆಂದರೆ ಒಂದು ರೀತಿಯಿಂದ ಪ್ರಯೋಜನಾಭಾವವನ್ನು ಸಮರ್ಥಿಸಿ ಇನ್ನೊಂದು ರೀತಿಯಿಂದಲೂ ಪ್ರಯೋಜನವಿಲ್ಲ ಎಂದು ಸಮರ್ಥಿಸುವುದಕೋಸ್ಕರ ಪ್ರಸಂಗವನ್ನು ಸೃಷ್ಟಿಸುತ್ತಿದಾರೆ.

**ಟೀಕಾ :** ಪ್ರಕಾರಾಂತರೇಣ ಪ್ರಯೋಜನಂ ನಿರಾಕರೋತಿ

**ಪ್ರತಿಪದಾರ್ಥ :** ಪ್ರಕಾರಾಂತರೇಣ = ರೀತ್ಯಂತರದಿಂದ, ಪ್ರಯೋಜನಂ = ಪ್ರಯೋಜನವನ್ನು ನಿರಾಕಾರೋತಿ = ನಿರಾಕರಣ ಮಾಡುತ್ತಿದ್ದಾರೆ.

**ಮೂಲ:—** ಸ್ವರೂಪತ್ವಾನ್ಮೋಕ್ಷಸ್ಯ ಪೂರ್ವಮೇವ ಸಿದ್ಧಸ್ತ್ವಾತ್

**ಪ್ರತಿಪದಾರ್ಥ :—** ಮೋಕ್ಷಸ್ಯ = ಮೋಕ್ಷಕ್ಕೆ, ಸ್ವರೂಪತ್ವಾತ್ = ಆತ್ಮಸ್ವರೂಪತ್ವವು ಪೂರ್ವಮೇವ = ಶಾಸ್ತ್ರವನ್ನು ಓದುವ ಮೊದಲೆ, ಸಿದ್ಧತ್ವಾತ್ = ಸಿದ್ಧತ್ವವಿರುವುದರಿಂದ. ಪ್ರಯೋಜನಂ = ಪ್ರಯೋಜನವು, ನಿರಸ್ತಂ = ನಿರಾಕರಣ ಮಾಡಲ್ಪಟ್ಟಿತು,

ಈ ಗ್ರಂಥದ ಅಭಿಪ್ರಾಯವನ್ನು ಶ್ರೀಮಟ್ಟೀಕಾಕೃತ್ಪಾದರು ವಿವರಿಸುತ್ತಿದ್ದಾರೆ—

**ಟೀಕಾ :-** [ಪ್ರಯೋಜನಂ ನಿರಸ್ತಮಿತಿ ಸಂಬಂಧಃ । ಅಜ್ಞಾನನಿವೃತ್ತಿಲಕ್ಷಣೋ ಹಿ ಮೋಕ್ಷಃ ಪರೇಣಾತ್ಮಸ್ವರೂಪತಯೈವೇಷ್ಟವ್ಯಃ । ಯಥಾಹ—ಆತ್ಮೈವಾಜ್ಞಾನಹಾನಿಃ ಇತಿ । ಆತ್ಮಸ್ವರೂಪವಮ್ ಚ ಪ್ರಾಗೇವ ಶಾಸ್ತ್ರ-ಪ್ರವೃತ್ತೇಃ ಸಿದ್ಧಮೇ ಇತಿ ಕಥಂ ತತ್ಪ್ರಯೋಜನಂ ಸ್ಯಾತ್ ? ನ ಹಿ ಕಶ್ಚಿತ್ ಸಿದ್ಧಸ್ಯ ಸಾಧನಾಯ ಯತತೇ । ನಾಪಿ ತತ್ಸಾಧನಾರ್ಹಮ್ । ]

ಪ್ರತಿಪದಾರ್ಥ :– ಪ್ರಯೋಜನಂ = ಪ್ರಯೋಜನವು, ನಿರಸ್ತಮಿತಿ = ನಿರಾಕರಣ ಮಾಡಲ್ಪಟ್ಟಿತು ಎಂಬ ಪ್ರಕೃತ ವಾಕ್ಯದಿಂದ ಸಂಬಂಧಃ = ಸ್ವರೂಪತ್ವಾನ್ಮೋಕ್ಷಸ್ಯ ಪೂರ್ವಮೇವ ಸಿದ್ಧತ್ವಾತ್ ಎಂಬ ಶ್ರೀಮದಾಚಾರ್ಯರ ವಾಕ್ಯಕ್ಕೆ ಅನ್ವಯ ಮಾಡಿಕೊಳ್ಳಬೇಕು. ಅಜ್ಞಾನ ನಿವೃತ್ತಿ ಲಕ್ಷಣೋ ಹಿ = ಅಜ್ಞಾನ ನಾಶ ರೂಪವಾದ ಮೋಕ್ಷಃ = ಮೋಕ್ಷವು. ಆತ್ಮಸ್ವರೂಪತಯೈವ = ಆತ್ಮಸ್ವರೂಪವೆಂದೇ, ಪರೇಣ = ಮಾಯಾವಾದಿಯಿಂದ, ಇಷ್ಟವ್ಯಃ = ಇಚ್ಛಾ ವಿಷಯವಾಗಿದೆ. (ಇದು ಹೇಗೆ ಗೊತ್ತಾಯಿತು ಎಂದರೆ ಹೇಳುತ್ತಿದ್ದಾರೆ). ಯಥಾಹ = ಹೇಗೆ ಹೇಳಿದ್ದಾನೆ ಎಂದರೆ. ಆತ್ಮೈವಾಜ್ಞಾನಹಾನಿಃ = ಆತ್ಮೈವ = ಆತ್ಮಸ್ವರೂಪವೇ, ಅಜ್ಞಾನಹಾನಿಃ = ಅಜ್ಞಾನ ನಾಶವು, ಇತಿ = ಹೀಗೆ, ಆಹ = ಹೇಳಿದನು. ಶಾಸ್ತ್ರಪ್ರವೃತ್ತೇಃ = ಶಾಸ್ತ್ರದಲ್ಲಿ ಅಧಿಕಾರಿಯು ಪ್ರವೃತ್ತಿಯನ್ನು ಮಾಡುವುದರ ಮೊದಲಿಗೆ. ಪ್ರಾಗೇವ = ಮೊದಲಿಗೆ. ಆತ್ಮಸ್ವರೂಪಂ ಚ = ಆತ್ಮಸ್ವರೂಪವು ಸಹ, ಸಿದ್ಧಮೇವ = ಸಿದ್ಧವೇ ಆಗಿರುತ್ತದೆ, ಇತಿ = ಇಂತೆಂದು, ತತ್ = ಸಿದ್ಧವಾದ ಆತ್ಮಸ್ವರೂಪವು, ಪ್ರಯೋಜನಂ = ಶಾಸ್ತ್ರದ ಪ್ರಯೋಜನವು, ಕಥಂ = ಹೇಗೆ. ಸ್ಯಾತ್ = ಆಗುತ್ತದೆ. ಕಶ್ಚಿತ್ = ಯಾವ ಪುರುಷನೂ ಸಹ, ಸಿದ್ಧಸ್ಯ = ಸಿದ್ಧವಾದ ವಿಷಯದ, ಸಾಧನಾಯ = ಸಮರ್ಥನಕ್ಕೋಸ್ಕರ, ನ ಹಿ ಯತತೇ = ಪ್ರಯತ್ನಿಸುವುದಿಲ್ಲ. ತತ್ = ಅಂತಹ ಸಿದ್ಧವಾದ ವಿಷಯವು, ಸಾಧನಾರ್ಹಂ ಅಪಿ ನ = ಸಾಧನಕ್ಕೆ ಯೋಗ್ಯವೂ ಆಗಲಾರದು,

**ಭಾವಾರ್ಥ:–** "ಆತ್ಮೈವ ಅಜ್ಞಾನಹಾನಿಃ" ಎಂದು ಮಾಯಾವಾದಿಯು ಹೇಳಿದ್ದರಿಂದ ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಆತ್ಮಸ್ವರೂಪವೇ ಆಗಿದೆ ಎಂದು ಮಾಯಾವಾದಿಯು ಅಂಗೀಕರಿಸಿದ್ದಾನೆ ಎಂದು ಸಿದ್ಧವಾಯಿತು, ಈ ಆತ್ಮಸ್ವರೂಪವು ಶಾಸ್ತ್ರವನ್ನು ವ್ಯಾಸಂಗ ಮಾಡುವ ಮೊದಲೇ ಅಧಿಕಾರಿಗೆ ಸಿದ್ಧವಾಗುತ್ತದೆ. ಹೀಗೆ ಶಾಸ್ತ್ರವನ್ನು ಓದುವ ಮೊದಲಿಗೆ ಆತ್ಮಸ್ವರೂಪವು ಸಿದ್ಧವಾಗುವುದರಿಂದ ಆತ್ಮಸ್ವರೂಪವು ಶಾಸ್ತ್ರಾಧ್ಯಯನದ ಪ್ರಯೋಜನ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಸಿದ್ಧವಾದದ್ದನ್ನು ಸಾಧಿಸಿದರೆ ಸಿದ್ಧಸಾಧನತಾ ಬಂದು ವ್ಯರ್ಥವಾಗುವುದರಿಂದ ಸಿದ್ಧವಾದವನ್ನು ಯಾರೂ ಸಾಧಿಸಲು ಪ್ರಯತ್ನಿಸುವುದಿಲ್ಲ ಮತ್ತು ಅಸಿದ್ಧವಾದದ್ದು ಸಾಧನಕ್ಕೆ ಯೋಗ್ಯವೇ ವಿನಹ ಸಿದ್ಧವಾದದ್ದು ಸಮರ್ಥನಕ್ಕೆ ಯೋಗ್ಯವಲ್ಲ. ಹೀಗೆ ಆತ್ಮಸ್ವರೂಪವು ಸಿದ್ಧವೇ ಆಗಿರುವುದರಿಂದ ಅದನ್ನು ಶಾಸ್ತ್ರದ ಪ್ರಯೋಜನ ಎಂದು ಹೇಳಲು ಬರುವುದಿಲ್ಲ, ಹೀಗೆ ಅಜ್ಞಾನ ನಿವೃತ್ತಿ ಎಂಬ ಫಲವು ಶಾಸ್ತ್ರಕ್ಕೆ ಇಲ್ಲ. ಆದ್ದರಿಂದ ಪ್ರಯೋಜನಾಭಾವಾತ್ ಅನಾರಂಭಣೀಯವು ಮಾಯಾವಾದಿಯ ಶಾಸ್ತ್ರವು ಎಂದು ಸಿದ್ಧವಾಯಿತು. ಹೀಗೆ ಮಾಯಾವಾದಿ ಮತದಲ್ಲಿ ಅಜ್ಞಾನವೆಂಬ ಪದಾರ್ಥವೇ ಕೂಡುವುದಿಲ್ಲವಾದ್ದರಿಂದ ಅಜ್ಞಾನ ನಿವೃತ್ತಿ ಎಂಬ ಪ್ರಯೋಜನವು ಇಲ್ಲ ಎಂದು ಒಂದು ರೀತಿಯಾಗಿ ಹೇಳಿದರು. ಈಗ ಅಜ್ಞಾನ ನಿವೃತ್ತಿ ಎಂಬ ಪ್ರಯೋಜನವು ಆತ್ಮಸ್ವರೂಪವೇ ಆಗಿದೆ. ಆತ್ಮಸ್ವರೂಪವು ಶಾಸ್ತ್ರಪ್ರವೃತ್ತಿಗಿಂತ ಮೊದಲೆ ಸಿದ್ಧವಾದ್ದರಿಂದ ಆತ್ಮಸ್ವರೂಪ ಎಂದು ಅಂಗೀಕರಿಸಲ್ಪಟ್ಟ ಅಜ್ಞಾನ ನಿವೃತ್ತಿ ಎಂಬ ಪ್ರಯೋಜನವು ಶಾಸ್ತ್ರಕ್ಕೆ ಇಲ್ಲ ಎಂದು ಇನ್ನೊಂದು ರೀತಿಯಿಂದ ಹೇಳಿದರು.

(ವಾದಿ) ಅಜ್ಞಾನ ನಿವೃತ್ತಿ ಲಕ್ಷಣ ಮೋಕ್ಷವು ಆತ್ಮಸ್ವರೂಪ ಎಂದು ಹೇಳಿದರೆ ಆತ್ಮಸ್ವರೂಪವು ಶಾಸ್ತ್ರಾಧ್ಯಯನ

ಕ್ಕಿಂತ ಮೊದಲಿಗೆ ಸಿದ್ಧವೇ ಆಗಿರುವುದರಿಂದ ಆತ್ಮಸ್ವರೂಪಾಭಿನ್ನವಾದ ಅಜ್ಞಾನ ನಿವೃತ್ತಿಯೂ ಕೂಡ ಶಾಸ್ತ್ರ ಪ್ರವೃತ್ತಿಗಿಂತಲೂ ಮೊದಲೆ ಸಿದ್ಧವಾಗಿವೆ ಎಂದು ಹೇಳಲೇಬೇಕಾಗಿರುವುದರಿಂದ ಶಾಸ್ತ್ರಕ್ಕೆ ಪ್ರಯೋಜನವಿಲ್ಲ ಎಂದು ಹೇಳಿದರೆ ಅದನ್ನು ಪರಿಹರಿಸಲು ಪ್ರಶ್ನಿಸುವ ಒಬ್ಬ ಮಾಯಾವಾದಿಯ ಅಭಿಪ್ರಾಯವನ್ನು ಅನುವಾದ ಮಾಡುತ್ತಿದ್ದಾರೆ ಶ್ರೀಮಟ್ಟೀಕಾಕೃತ್ಪಾದರು—

**ಟೀಕಾ:**—['ಜ್ಞಾತಆತ್ಮೈವ ಅಜ್ಞಾನಹಾನಿಃ ನಾತ್ಮಮಾತ್ರಮ್' ಇತಿ ಕಶ್ಚಿತ್ ।]

**ಪ್ರತಿಪದಾರ್ಥ :—** ಜ್ಞಾತ ಆತ್ಮೈವ=ಜ್ಞಾತ=ಜ್ಞಾನ ವಿಷಯನಾದಂತಹ. ಆತ್ಮೈವ=ಆತ್ಮನೇ. ಅಜ್ಞಾನ ಹಾನಿಃ=ಅಜ್ಞಾನಹಾನಿ ಎಂಬ ಮೋಕ್ಷ ಸ್ವರೂಪವು, ನ ಆತ್ಮ ಮಾತ್ರಂ=ಕೇವಲ ಆತ್ಮನು (ಜ್ಞಾನ ವಿಷಯನಾಗದೆ ಇರುವ ಆತ್ಮನು) ಮೋಕ್ಷಸ್ವರೂಪನು ಅಲ್ಲ. ಇತಿ=ಹೀಗೆ, ಕಶ್ಚಿತ್=ಮಾಯಾವಾದಿಯೊಬ್ಬನು ಶಂಕಿಸುತ್ತಾನೆ,

**ಭಾವಾರ್ಥ :—** ಕೇವಲ ಆತ್ಮನು ಶಾಸ್ತ್ರಪ್ರವೃತ್ತಿಗಿಂತ ಮೊದಲೆ ಇದ್ದರೂ ಸಹ ಅವನು ಅಜ್ಞಾನ ನಿವೃತ್ತಿ ಎಂಬ ಮೋಕ್ಷರೂಪನು ಅಲ್ಲ. ಆದ್ದರಿಂದ ಅವನು ಜ್ಞಾನವಿಷಯನಾಗಬೇಕು, ಆಗ ಮಾತ್ರ ಅವನು ಅಜ್ಞಾನ ನಿವೃತ್ತಿ ಎಂಬ ಮೋಕ್ಷ ಸ್ವರೂಪನಾಗುತ್ತಾನೆ. ಆದ್ದರಿಂದ ಈ ಆತ್ಮಜ್ಞಾನವನ್ನು ಮಾಡಿಕೊಳ್ಳಲು ಶಾಸ್ತ್ರವು ಬೇಕು. ಆದ್ದರಿಂದ ಶಾಸ್ತ್ರಕ್ಕೆ ಪ್ರಯೋಜನವುಂಟು. ಪ್ರಯೋಜನವಿರುವುದರಿಂದ ಶಾಸ್ತ್ರವು ಅನಾರಂಭಣೀಯವಾಗುವುದಿಲ್ಲ ಎಂದು ಮಾಯಾವಾದಿಯ ಅಭಿಪ್ರಾಯ.

ಈ ಮೇಲಿನ ಮಾಯಾವಾದಿಯ ಅಭಿಪ್ರಾಯವನ್ನು ಖಂಡಿಸುತ್ತಾರೆ ತದಸತ್ ಎಂಬ ಗ್ರಂಥದಿಂದ—

**ಟೀಕಾ :—** ತದಸತ್ । ಆತ್ಮನೋ ಜ್ಞಾನಕರ್ಮತಾನಂಗೀಕಾರಾತ್ । ವೃತ್ತಿವಿಷಯತಾ ಅಸ್ತೀತಿ ಚೇತ್ ತಥಾಪಿ ವೃತ್ತಿವಿಶಿಷ್ಟ ಆತ್ಮಾ ಮೋಕ್ಷ ಇತ್ಯುಕ್ತಂ ಸ್ಯಾತ್ ! ತಥಾ ಚ ವೃತ್ತೇರ್ನಿವೃತ್ತೌ ಮೋಕ್ಷ ನಿವೃತಿ ಪ್ರಸಂಗಃ । ವೃತ್ತ್ಯುಪಲಕ್ಷಿತ ಆತ್ಮಾ ಮೋಕ್ಷ ಇತಿ ಚೇತ್ ತಥಾಪಿ ಜೀವನ್ಮುಕ್ತೌ ಪ್ರಸಂಗ ಇತ್ಯೇಷಾ ದಿಕ್ ।

**ಪ್ರತಿಪದಾರ್ಥ :**—ತತ್=ಆ ಮಾಯಾವಾದಿಯಿಂದ ಹೇಳಲ್ಪಟ್ಟಿದ್ದು. ಅಸತ್=ಸರಿಯಲ್ಲ. ಆತ್ಮನಃ=ಆತ್ಮನಿಗೆ ಜ್ಞಾನ ಕರ್ಮತ್ವಾನಂಗೀಕಾರಾತ್ = ಜ್ಞಾನ ವಿಷಯತ್ವವನ್ನು ಅಂಗೀಕರಿಸಿಲ್ಲವಾದ್ದರಿಂದ ವೃತ್ತಿವಿಷಯತಾ=ವೇದಾಂತ ಜನ್ಯ ವೃತ್ತಿ ವಿಷಯತ್ವವು, ಅಸ್ತೀತಿ ಚೇತ್=(ಆತ್ಮನಲ್ಲಿ) ಇದೆ ಎಂದು ಹೇಳಿದರೆ ತಥಾಪಿ=ಹಾಗೆ ಹೇಳಿದರೂ ಸಹ ವೃತ್ತಿವಿಶಿಷ್ಟ ಆತ್ಮಾ ಮೋಕ್ಷ=ವೃತ್ತಿಯಿಂದ ಕೂಡಿದಂತಹ ಆತ್ಮನು ಮೋಕ್ಷಸ್ವರೂಪನು, ಇತ್ಯುಕ್ತಂ ಸ್ಯಾತ್= ಎಂದು ಹೇಳಿದಂತಾಗುತ್ತದೆ, ತಥಾಚ=ಹಾಗೆ ಹೇಳಿದ್ದರಿಂದ, ವೃತ್ತೇಃ=ವೃತ್ತ್ಯಾತ್ಮಕ ಜ್ಞಾನದ, ನಿವೃತ್ತೌ ನಾಶವಾಗುತ್ತಿರಲು. ಮೋಕ್ಷ ನಿವೃತ್ತಿ ಪ್ರಸಂಗಃ=ಮೋಕ್ಷದ ನಿವೃತ್ತಿ(ನಾಶದ) ಪ್ರಸಂಗವು. ವೃತ್ತ್ಯುಪಲಕ್ಷಿತಃ=ವೃತ್ತಿ =ವೃತ್ತ್ಯಾತ್ಮಕ ಜ್ಞಾನದಿಂದ, ಉಪಲಕ್ಷಿತಃ=ಉಪಲಕ್ಷಿತನಾದಂತಹ, ಆತ್ಮಾ=ಆತ್ಮನು, ಮೋಕ್ಷಃ=ಮೋಕ್ಷ ಸ್ವರೂಪನು, ಇತಿ ಚೇತ್=ಹೀಗೆ ಹೇಳಿದರೆ. ತಥಾಪಿ=ವೃತ್ತ್ಯುಪಲಕ್ಷಿತ ಆತ್ಮನು ಮೋಕ್ಷಸ್ವರೂಪನು ಎಂದು ಅಂಗೀಕಾರ ಮಾಡಿದರೂ ಕೂಡ, ಜೀವನ್ಮುಕ್ತೌ=ಜೀವನ್ಮುಕ್ತ್ಯವಸ್ಥೆಯಲ್ಲಿ ಪ್ರಸಂಗಃ=ಅಜ್ಞಾನ ನಾಶವಾಗಿದೆ ಎಂದು ಹೇಳುವ ಪ್ರಸಂಗವು ಬರುತ್ತದೆ, ಇತಿ=ಈ ರೀತಿಯಾಗಿ, ಏಷಾ=ಈ ಮೇಲೆ ಹೇಳಲ್ಪಟ್ಟಂತಹುದು. ದಿಕ್=ವಾದಿಯನ್ನು ಖಂಡನ ಮಾಡುವ ಪದ್ಧತಿಯು—

**ಭಾವಾರ್ಥ :—** ಈ ಮೇಲೆ ಹೇಳಿದಂತೆ ಆತ್ಮಜ್ಞಾನವನ್ನು ಮಾಡಿಕೊಳ್ಳಲು ಶಾಸ್ತ್ರವು ಬೇಕು, ಆದ್ದರಿಂದ ಶಾಸ್ತ್ರಕ್ಕೆ ಪ್ರಯೋಜನವುಂಟು ಎಂದು ಮಾಯಾವಾದಿಯು ಹೇಳಿದ್ದು ಸರಿಯಲ್ಲ. ಏಕೆಂದರೆ "ವೃತ್ತಿಪ್ರತಿಬಿಂಬಿತ ಚೈತನ್ಯಾಭಿ

ವ್ಯಕ್ತ ಅಧಿಷ್ಠಾನ ಚೈತನ್ಯ" ಎಂಬ ಜ್ಞಾನಕ್ಕೆ ಆತ್ಮನು ವಿಷಯನಾಗುವುದಿಲ್ಲ, ಏಕೆಂದರೆ ಆತ್ಮನು ಇಂತಹ ಜ್ಞಾನಕ್ಕೆ ವಿಷಯ ಎಂದು ಅಂಗೀಕರಿಸಿದರೆ—ತಾನೇ ಕರ್ತಾ ತಾನೇ ಕರ್ಮ ಎಂದು ಕರ್ತೃತ್ವ ಮತ್ತು ಕರ್ಮತ್ವ ಎಂಬ ಧರ್ಮಗಳನ್ನು ಒಂದೇ ಸ್ಥಾನದಲ್ಲಿ ಹೇಳಬೇಕಾಗುತ್ತದೆ. ಏಕಸ್ಯಾಂ ಕ್ರಿಯಾಯಾಂ ಕರ್ತೃಕರ್ಮಣೋಃ ಭೇದಃ ಎಂಬ ನಿಯಮಾನುಸಾರವಾಗಿ ಜ್ಞಾನವೆಂಬ ಕ್ರಿಯಾದಲ್ಲಿ ಆತ್ಮನೇ ಕರ್ತಾ ಆತ್ಮನೇ ಕರ್ಮ ಎಂದು ಹೇಳಲು ಬರುವುದಿಲ್ಲ. ಆದ್ದರಿಂದ ಆತ್ಮನು ನಿನ್ನ ಮತದಲ್ಲಿ ಜ್ಞಾತವಾಗಿಲ್ಲ. ಆದ್ದರಿಂದ ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಕೂಡುವುದಿಲ್ಲ ಎಂದು ನಾವು, ಚೈತನ್ಯವಿಷಯತ್ವವು ಆತ್ಮನಲ್ಲಿ ಇಲ್ಲದೇ ಇದ್ದರೂ ವೇದಾಂತ ಜನ್ಯ ವೃತ್ತಿವಿಷಯತ್ವವು ಆತ್ಮನಲ್ಲಿದೆ, ಆದ್ದರಿಂದ ಆತ್ಮನು ಜ್ಞಾತನಾದನು. ಆದ್ದರಿಂದ ಇಂತಹ ಜ್ಞಾನವು ಆಗಲು ಶಾಸ್ತ್ರವು ಬೇಕು ಆದ್ದರಿಂದ ಶಾಸ್ತ್ರಕ್ಕೆ ವೈಯರ್ಥ್ಯವಿಲ್ಲ ಎಂದು ನೀನು ಶಂಕೆ ಮಾಡಿದರೆ ಅದಕ್ಕೆ ಉತ್ತರವೇನೆಂದರೆ ವೃತ್ತಿವಿಷಯತ್ವವನ್ನು ಆತ್ಮನಿಗೆ ಅಂಗೀಕಾರ ಮಾಡಿದರೂ ಸಹ ಮೇಲೆ ಹೇಳಿದ ಅಜ್ಞಾನ ನಿವೃತ್ತಿ ಎಂಬ ಮೋಕ್ಷವಿಲ್ಲ ಎಂಬ ಅಂಶವು ಪರಿಹೃತವಾಗಿಲ್ಲ, ಏಕೆಂದರೆ ವೃತ್ತಿವಿಶಿಷ್ಟ ಆತ್ಮಾ ಮೋಕ್ಷಃ ಎಂದರೆ ವೃತ್ತಿವಿಶಿಷ್ಟನಾದ ಆತ್ಮನು ಮೋಕ್ಷ ಎಂದು ಹೇಳಿದಂತಾಯಿತು, ವಿಶಿಷ್ಟವೆಂಬ ಪದಾರ್ಥವು ಅನಿತ್ಯ, ಆದ್ದರಿಂದ ವೃತ್ತಿ ಎಂಬ ವಿಶೇಷಣವು ಇಲ್ಲದಿರುವಾಗ ವೃತ್ತಿವಿಶಿಷ್ಟಾತ್ಮವಿಲ್ಲ ಆದ್ದರಿಂದ ವೃತ್ತಿ ವಿಷಯನಾದ ಆತ್ಮನು ಮೋಕ್ಷ ಎನ್ನುವುದು ಹೋಯಿತು. ಆದ್ದರಿಂದ ಜ್ಞಾತಾತ್ಮನು ಮೋಕ್ಷ ಎಂದು ಹೇಳಲು ಬರುವುದಿಲ್ಲ ಇನ್ನು ವೃತ್ತಿಯು ಆತ್ಮನಿಗೆ ವಿಶೇಷಣ ಎಂದು ಹೇಳುವುದಿಲ್ಲ. ಅದು ಉಪಲಕ್ಷಣ ಎಂದು ಹೇಳುತ್ತೇವೆ. ಒಂದು ವೇಳೆ ವೃತ್ತಿಯು ಆತ್ಮನಿಗೆ ವಿಶೇಷಣವಾಗಿದ್ದರೆ, ವೃತ್ತಿನಾಶವಾದಾಗ ವೃತ್ತಿವಿಶಿಷ್ಟಾತ್ಮವಿಲ್ಲೆಂದಾಗಿ ಮೋಕ್ಷವು ಇಲ್ಲ ಎಂದು ಹೇಳಬಹುದಿತ್ತು, ಆದರೆ ವೃತ್ತಿಯು ಉಪಲಕ್ಷಣ ಎಂದು ಹೇಳಿದ್ದರಿಂದ ವೃತ್ತಿಯು ನಾಶವಾದರೂ ವೃತ್ತ್ಯುಪಲಕ್ಷಿತ (ವೃತ್ತಿ ಎಂಬ ಉಪಲಕ್ಷಣದಿಂದ ಕೂಡಿದ) ಆತ್ಮನು ಇಲ್ಲ ಎಂದು ಆಗುವುದಿಲ್ಲ. ಆದ್ದರಿಂದ ಮೋಕ್ಷಾಭಾವ ಪ್ರಸಂಗವಿಲ್ಲ.

ವೃತ್ತ್ಯುಪಲಕ್ಷಿತ ಆತ್ಮ ಮೋಕ್ಷ ಎಂದರೆ ತತ್ತ್ವವಿಷಯಕ ಅಪರೋಕ್ಷಜ್ಞಾನದಿಂದ ಉಪಲಕ್ಷಿತನಾದಂತಹ ಆತ್ಮನು ಮೋಕ್ಷ ಎಂದು ಹೇಳಿದಂತಾಯಿತು. ಈ ಆತ್ಮನಿಗೆ ಅಜ್ಞಾನವೇ ಇಲ್ಲ ಎಂದು ನೀನು ಹೇಳಬೇಕು. ಇದೇ ಆತ್ಮನು ಜೀವನ್ಮುಕ್ತ್ಯವಸ್ಥೆಯಲ್ಲಿ ಇರುವುದರಿಂದ ಆ ಅವಸ್ಥೆಯಲ್ಲಿ ಅಜ್ಞಾನವಿಲ್ಲ ಎಂದೂ ಹೇಳಬೇಕು. ಆಗಲಿ ಅಜ್ಞಾನವಿಲ್ಲ ಎಂದು ಅಂಗೀಕಾರ ಮಾಡುತ್ತೇನೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಆ ಅವಸ್ಥೆಯಲ್ಲಿ ಅಜ್ಞಾನ ವಿಲ್ಲವೆಂದು ಆದರೆ ಅಜ್ಞಾನಕಾರ್ಯವಾದ ಭಿಕ್ಷಾಟನಾದಿಗಳಲ್ಲಿ ಪ್ರವೃತ್ತಿಯೇ ಇಲ್ಲ ಎಂದಾಗಬೇಕಾದೀತು. ಬಹುಭಾಗ ಅಜ್ಞಾನವು ಹೋಗಿ ಸ್ವಲ್ಪ ಭಾಗ ಮಾತ್ರ ಉಳಿದದ್ದರಿಂದ ಭಿಕ್ಷಾಟನಾದಿಗಳಲ್ಲಿ ಪ್ರವೃತ್ತಿ ಕೂಡುತ್ತದೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಅಜ್ಞಾನವು (ಅವಿದ್ಯಾವು) ನಿರಂಶವಾಗಿದೆ, ಅಂದರೆ ಅಜ್ಞಾನದಲ್ಲಿ ಅಂಶಗಳು ಇಲ್ಲವಾದ್ದರಿಂದ ಬಹು ಅಂಶ ನಾಶವಾಗಿ ಸ್ವಲ್ಪ ಅಂಶ ಉಳಿದಿದೆ ಎಂದು ಹೇಳಲು ಬರುವುದಿಲ್ಲ. ಹೀಗಾಗಿ ಅಜ್ಞಾನವು ಸಂಪೂರ್ಣವಾಗಿ ನಾಶವಾಗಿದೆ ಎಂದು ಒಪ್ಪಬೇಕು, ಅಜ್ಞಾನವು ನಾಶವಾಗಿದ್ದರೆ ಭಿಕ್ಷಾಟನಾದಿಗಳು ಕೂಡುವುದೇ ಇಲ್ಲ,

ಒಂದು ವೇಳೆ ಅವಿದ್ಯಾವು (ಅಜ್ಞಾನವು) ಕೂಡ ನಾಶವಾಗಿದೆ. ಅಂದರೆ ಅವಿದ್ಯಾದಲ್ಲಿ ಅಂಶಗಳು ಇರುತ್ತದೆ ಎಂದು ಹೇಳಿ ಬಹು ಅಂಶ ನಾಶವಾಗಿ ಸ್ವಲ್ಪವಾದ ಅಂಶ ಇರುವುದರಿಂದ ಭಿಕ್ಷಾಟನಾದಿಗಳು ಕೂಡುತ್ತವೆ ಎಂದು ಹೇಳಿದರೆ ಈ ಅವಿದ್ಯಾದ ಅಂಶವು ಅಜ್ಞಾನದ ಕಾರ್ಯವು, ಹೌದೋ ಅಥವಾ ಅಲ್ಲವೋ ಎಂದು ಪ್ರಶ್ನೆ ಬರುತ್ತದೆ. ಅಲ್ಲ ಎಂದರೆ ಅಜ್ಞಾನದ ಕಾರ್ಯವಲ್ಲ ಎಂಬ ಪಕ್ಷ ಸತ್ಯ ಎಂದಾಯಿತು. ಆಗ ಮಿಥ್ಯಾತ್ವರೂಪ ಧರ್ಮವಿಲ್ಲವಾದ್ದರಿಂದ ಬ್ರಹ್ಮಾತಿರಿಕ್ತವಾದ ಅಜ್ಞಾನದ ಅಂಶಕ್ಕೆ ಮಿಥ್ಯಾತ್ವವಿಲ್ಲ ಎಂದು ಹೇಳಿದಂತಾಗುತ್ತದೆ. ಆದರಿಂದ ಆತ್ಮಾತಿರಿಕ್ತವಾದದ್ದು ಸರ್ವವೂ ಮಿಥ್ಯಾ ಎಂಬ ಜಗನ್ಮಿಥ್ಯಾತ್ವವಾದವನ್ನು ಬಿಟ್ಟಂತಾಗುತ್ತದೆ, ಇನ್ನು ಈ ಅಂಶವು ಅಜ್ಞಾನಕಾರ್ಯ ಎಂದು ಹೇಳಿದರೆ ಅಜ್ಞಾನದ ನಾಶವಾದಾಗ ಅಜ್ಞಾನದ ಕಾರ್ಯವಾದಂತಹ ಈ ಅಂಶವೂ ಕೂಡ

(ಅವಿದ್ಯಾದ ಅಂಶವೂ ಕೂಡ) ನಾಶವಾಗಲೇಬೇಕು. ಏಕೆಂದರೆ ಉಪಾದಾನ ಎಂಬ ಕಾರಣವು ನಾಶವಾದರೆ ಉಪಾದೇಯ ಪದಾರ್ಥದ ನಾಶವು ಆಗಲೇಬೇಕು. ಹೀಗಾಗಿ ಅಜ್ಞಾನ ನಾಶವಾದರೆ ಅಜ್ಞಾನದ ಕಾರ್ಯವಾದ ಅಜ್ಞಾನದ ಅಂಶವೂ ಸಹ ನಾಶವಾಗುವುದರಿಂದ ಭಿಕ್ಷಾಟನಾದಿಗಳಿಗೆ ಕಾರಣವಾದ ಅಜ್ಞಾನದ ಅಂಗವು ಇಲ್ಲವೆಂದಂತಾಯಿತು. ಆಗ ಭಿಕ್ಷಾಟನಾದಿಗಳು ಅಯುಕ್ತವಾಗುತ್ತದೆ.

ಅಪರೋಕ್ಷಜ್ಞಾನಾನಂತರದಲ್ಲಿ ಅಜ್ಞಾನವು ಸಂಪೂರ್ಣವಾಗಿಯೇ ನಾಶವಾಗಿದೆ. ಹಾಗಾದರೆ ಭಿಕ್ಷಾಟನಾದಿಗಳು ಹೇಗೆ ಎಂಬ ಪ್ರಶ್ನೆಗೆ ನಮ್ಮ ಉತ್ತರವೇನೆಂದರೆ ಆ ಅಜ್ಞಾನದ ಕಾಲದಲ್ಲಿ ಭಿಕ್ಷಾಟನಾದಿಗಳ ಸಂಸ್ಕಾರ ಇರುತ್ತದೆ. ಆ ಸಂಸ್ಕಾರದ ಬಲದಿಂದ ಅಜ್ಞಾನನಾಶಾನಂತರದಲ್ಲಿಯೂ ಸಹ ಭಿಕ್ಷಾಟನಾದಿಗಳು ಯುಕ್ತವಾಗುತ್ತವೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಆ ಸಂಸ್ಕಾರವೂ ಕೂಡ ಅಜ್ಞಾನದ ಕಾರ್ಯವೇ ಆಗಿರುವುದರಿಂದ ಅಜ್ಞಾನ ನಾಶವಾದಾಗ ಆ ಅಜ್ಞಾನದ ಸಂಸ್ಕಾರವೂ ಕೂಡ ನಾಶವಾಗಿದೆ ಎಂದು ಒಪ್ಪಲೇಬೇಕು ಆಗ ಜೀವನ್ಮುಕ್ತ್ಯವಸ್ಥೆಯಲ್ಲಿ ಭಿಕ್ಷಾಟನೆಗಳು ಸಂಸ್ಕಾರ ಬಲದಿಂದಾಗುತ್ತದೆ ಎಂಬ ಮಾತು ತಪ್ಪಾಗುತ್ತದೆ. ಹೀಗೆ ವೃತ್ತ್ಯುಪಲಕ್ಷಿತ ಆತ್ಮನು ಮೋಕ್ಷ ಎಂದು ಕೂಡ ಹೇಳಲು ಬರುವುದಿಲ್ಲ. ಆದ್ದರಿಂದ ನಿನ್ನ ಮತದಲ್ಲಿ ಮೋಕ್ಷ ಎಂಬ ಪ್ರಯೋಜನದ ಅಭಾವ ಬಂದದ್ದರಿಂದ ಶಾಸ್ತ್ರಕ್ಕೆ ಅನಾರಂಭಣೀಯತ್ವವು ಬಂದೇಬರುತ್ತದೆ ಎಂದು ಮಾಯಾವಾದಿಯನ್ನು ಖಂಡನ ಮಾಡ ತಕ್ಕದ್ದು ಎಂದು ಇಷ್ಟಸಿದ್ಧಿಕಾರನ ಮತಾನುಸಾರಿಯಾದ 'ತತ್ತ್ವಪ್ರದೀಪಿಕಾಕಾರರನ್ನು' ಶ್ರೀಮಟ್ಟೀಕಾಕೃತ್ಪಾದರು ಖಂಡಿಸಿದ್ದಾರೆ.

**ಅವತಾರಿಕಾ :—** ಆನಂದಬೋಧಕಾರನ ಅಭಿಪ್ರಾಯವನ್ನು ಖಂಡಿಸುವುದಕ್ಕೋಸ್ಕರ ಅವನ ಮತವನ್ನು ಅನುವಾದ ಮಾಡುತ್ತಾರೆ "ಅಪರಹಃ ಆಹ" ಎಂಬ ಗ್ರಂಥದಿಂದ—

**ಟೀಕಾ :—** ಅಪರಃ ಆಹ । ನಾವಿದ್ಯಾಸ್ತಮಯು ಲಕ್ಷಣಂ ಮೋಕ್ಷಮಾತ್ಮಸ್ವರೂಪಮಾಚಕ್ಷ್ಮಹೇ । ಕಿಂ ನಾಮ ? । ಅನ್ಯಮೇವ । ನ ಚ ವಾಚ್ಯಂ ತಸ್ಯಸತ್ತ್ವೇಽದ್ವೈತಹಾನಿಃ ಅಸತ್ತ್ವೇ ತದಭಾವಃ ಸದಸತ್ತ್ವಂ ವಿರುದ್ಧಮ್ । ಸದಸದ್ವಿಲಕ್ಷಣತ್ವೇಽಜ್ಞಾನನಿವೃತ್ತಿತ್ವಾನುಪಪತ್ತಿಃ ॥ ಪ್ರತಿಯೋಗಿತನ್ನಿವೃತ್ತ್ಯೋರ್ವೈಲಕ್ಷಣ್ಯಸ್ಯಾವಶ್ಯಕತ್ವಾತ್ ಇತಿ । ಪಂಚಮ ಪ್ರಕಾರತಾಭ್ಯುಪಗಮಾತ್ । ಯಥೋಕ್ತಮ್ ನ ಸನ್ನಾಸನ್ನ ಸದಸನ್ನಾನಿರ್ವಾಚ್ಯಶ್ಚ ತತ್ಕ್ಷಯಃ । ಯಕ್ಷಾನುರೂಪೋ ಬಲಿರಿತ್ಯಾಚಾರ್ಯಾಃ ಪ್ರತ್ಯಪೀಪದನ್ ' ಇತಿ । ತತ್ರಾಹ—

**ಪ್ರತಿಪದಾರ್ಥ :—** ಅಪರಃ = ಅದ್ವೈತಮತಾನುಯಾಯಿಯಾದ ಆನಂದಬೋಧಕಾರನು ಆಹ = ಹೇಳಿದನು । ಅವಿದ್ಯಾಸ್ತಮಯಲಕ್ಷಣಂ = ಅವಿದ್ಯಾ = ಅವಿದ್ಯಾದ, ಅಸ್ತಮಯ = ನಾಶವು ಲಕ್ಷಣಂ = ಎಂಬಂತಹ, ಮೋಕ್ಷಂ ಮೋಕ್ಷವನ್ನು, ಆತ್ಮಸ್ವರೂಪಂ = ಆತ್ಮಸ್ವರೂಪವನ್ನಾಗಿ, ನ ಆಚಕ್ಷ್ಮಹೆ = ಹೇಳುವುದಿಲ್ಲ । ಕಿಂ ನಾಮ = ಹಾಗಾದರೆ ಏನು ಹೇಳುತ್ತೀನೆ ಎಂದರೆ, ಅನ್ಯಮೇವ = ಆತ್ಮಸ್ವರೂಪದಿಂದ ಭಿನ್ನವೆಂದೇ ಹೇಳುತ್ತೇವೆ । ತಸ್ಯ = ಆ ಅಜ್ಞಾನ ನಿವೃತ್ತಿ ಎಂಬ ಮೋಕ್ಷಕ್ಕೆ, ಸತ್ವೇ = ಸತ್ವವು ಇದ್ದರೆ, ಅದ್ವೈತ ಹಾನಿಃ = (ಬ್ರಹ್ಮ ಮತ್ತು ಮೋಕ್ಷ ಎಂಬ ಎರಡು ಪದಾರ್ಥವನ್ನು ಅಂಗೀಕರಿಸಿದಂತಾಗುವುದರಿಂದ) ಬ್ರಹ್ಮ ಒಂದೇ ಸತ್ಯ ಪದಾರ್ಥ ಎಂಬ ಅದ್ವೈತವಾದವನ್ನು ಬಿಟ್ಟಂತಾಯಿತು । ತಸ್ಯ = ಆ ಅಜ್ಞಾನ ನಿವೃತ್ತಿ ಮೋಕ್ಷಕ್ಕೆ, ಅಸತ್ವೇ = ಅಸತ್ವವು ಇದ್ದರೆ, ತದಭಾವಃ = ತತ್ = ಆ ಮೋಕ್ಷದ ಅಭಾವಃ = ಅಭಾವವು (ಮೋಕ್ಷವೇ ಇಲ್ಲದಂತಾಗುವುದು), ಸದಸತ್ವಂ = ಸತ್ವ ಮತ್ತು ಅಸತ್ವಗಳ ಮೇಲನವು, ವಿರುದ್ಧಮ್ = ವಿರುದ್ಧವಾಗಿದೆ. ತಸ್ಯ = ಅಜ್ಞಾನ ನಿವೃತ್ತಿ ಮೋಕ್ಷಕ್ಕೆ, ಸದಸದ್ವಿಲಕ್ಷಣತ್ವೇ = ಸದಸದ್ವಿಲಕ್ಷಣತ್ವವು ಇದ್ದರೆ ಅಜ್ಞಾನ ನಿವೃತ್ತಿತ್ವಾನುಪಪತ್ತಿಃ = ಅಜ್ಞಾನದ ನಾಶ ಎನ್ನುವುದರ ಕೂಡದೆ ಇರುವಿಕೆಯು ಪ್ರತಿಯೋಗಿ = ಪ್ರತಿ

ಯೋಗಿಯು ಮತ್ತು ತನ್ನಿವೃತ್ತ್ಯೋಃ=ಅದರ ನಾಶ — ಇವುಗಳ ವೈಲಕ್ಷಣ್ಯಸ್ಯ = ಬೇರೆ ಬೇರೆ ಸತ್ವದ, ಅವಶ್ಯಕತ್ವಾತ್ = ಅವಶ್ಯಕತೆ ಇರುವುದರಿಂದ ಅಜ್ಞಾನ ನಿವೃತ್ತಿ ಮೋಕ್ಷಕ್ಕೆ ಯಾವ ಧರ್ಮವನ್ನು ಹೇಳು ತ್ತೀರಿ, ಇತಿ=ಇಂತೆಂದು, ನ ಚ ವಾಚ್ಯಮ್ = ಹೇಳುವುದು ಬೈಡ ಏಕೆಂದರೆ, ಪಂಚಮ ಪ್ರಕಾರತಾ=ಐದನೆಯ ದಾದ ಧರ್ಮದ, ಅಭ್ಯುಪಗತತ್ವಾತ್=ಸ್ವೀಕಾರ ಮಾಡಿದ್ದರಿಂದ (ಮೇಲೆ ಹೇಳಿದ ನಾಲ್ಕು ಧರ್ಮದ ಅಂಗೀಕಾರ ದಿಂದ ಬರುವ ದೋಷವಿಲ್ಲ), ಯಥಾ ಉಕ್ತಂ=ಈ ವಿಷಯದಲ್ಲಿ ಹೇಗೆ ಹೇಳಲ್ಪಟ್ಟಿದೆ ಎಂದರೆ, ತತ್ಕ್ಷಯಃ=ತತ್= ಅಜ್ಞಾನ, ಕ್ಷಯಃ=ನಾಶವೆಂಬ ಮೋಕ್ಷವು, ನ ಸತ್=ಸತ್ಯವಲ್ಲ, ನ ಅಸತ್=ಅಸತ್ಯವು ಅಲ್ಲ, ನ ಸದಸತ್= ಸಪಸತ್ತುವು ಅಲ್ಲ, ಚ ಮತ್ತು, ಅನಿರ್ವಾಚ್ಯಃ=ಸದಸದ್ವಿಲಕ್ಷಣವೂ ಅಲ್ಲ. ಬಲಿಃ=ಬಲಿಯು (ಅರ್ನವು), ಯಕ್ಷಾನು ರೂಪಃ=ಪಿಶಾಚಿಗೆ ಅನುಸರಿಸಿ ಇರುತ್ತದೆ ; ಇತಿ=ಇಂತೆಂದು, ಆಚಾರ್ಯಾಃ=ಆಚಾರ್ಯರು ಪ್ರತ್ಯಪೀಪದನ್= ಪ್ರತಿಪಾದಿಸಿದ್ದಾರೆ, ತತ್ರ=ಆ ವಿಷಯದಲ್ಲಿ ಉತ್ತರವನ್ನು ಶ್ರೀಮದಾಚಾರ್ಯರು ಆಹ—ಹೇಳುತ್ತಾರೆ "ಅಜ್ಞಾನಾ ಸಂಭವೇನ" ಎಂಬ ಗ್ರಂಥದಿಂದ.

**ಭಾವಾರ್ಥ** :—ಆನಂದಭೋಧಕಾರನ ಅಭಿಪ್ರಾಯವೇನೆಂದರೆ ಅಜ್ಞಾನನಿವೃತ್ತಿತ ಎಂಬ ಮೋಕ್ಷವು ಆತ್ಮಸ್ವರೂಪ ಎಂದು ಹೇಳುವುದಿಲ್ಲ. ಆತ್ಮಸ್ವರೂಪವೇ ಬೇರೆ ಅಜ್ಞಾನ ನಿವೃತ್ತಿ ಮೋಕ್ಷ ಎಂಬ ಪದಾರ್ಥವೇ ಬೇರೆ ಎಂದು ಹೇಳುತ್ತೇನೆ ಎನ್ನುತ್ತಾನೆ ಹಾಗಾದರೆ ಈ ಅಜ್ಞಾನ ನಿವೃತ್ತಿ ಮೋಕ್ಷವು ಆತ್ಮಸ್ವರೂಪದಿಂದ ಭಿನ್ನ ಎಂದಂತಾಯಿತು ಹೀಗಿರುವಾಗ ಈ ಮೋಕ್ಷವು—

(ಅ) ಸತ್ಯ ಎಂದರೆ=ಅದ್ವೈತಹಾನಿಯಾಗುತ್ತದೆ.

(ಆ) ಅಸತ್ ಎಂದರೆ=ಶಶಿವಿಶಾಷಣದಂತೆ ಮೋಕ್ಷ ಎಂಬ ಪದಾರ್ಥವೇ ಇಲ್ಲವೆಂದಾಗುತ್ತದೆ,

(ಇ) ಸದಸತ್ ಎಂದರೆ=ಸತ್ವಾಸತ್ವಗಳಿಗೆ ಪರಸ್ಪರ ವಿರಹಾತ್ಮಕತ್ವಲಕ್ಷಣವಿರೋಧ ಇರುವುದರಿಂದ ಸದಸತ್ವವನ್ನು ಒಂದೇ ಪದಾರ್ಥದಲ್ಲಿ ಅಂಗೀಕಾರ ಮಾಡಲು ಬರುವುದಿಲ್ಲ,

(ಈ) ಸದಸದ್ವಿಲಕ್ಷಣತ್ವವನ್ನು ಹೇಳುತ್ತೇನೆಂದರೆ ಅದನ್ನು ಹೇಳಲು ಬರುವುದಿಲ್ಲ, ಏಕೆಂದರೆ ಅಜ್ಞಾನವು ಅಥವಾ ಅಜ್ಞಾನೋಪಾದಾನಕವೇ (ಅಜ್ಞಾನವೇ ಪರಿಣಾಮ ಹೊಂದಿದ) ಅವಂತಹ ಪರಿಣಾಮ ಹೊಂದಿದ) ಆದಂತಹ ಅಜ್ಞಾನದ ಕಾರ್ಯವು ಸದಸದ್ವಿಲಕ್ಷಣವಾಗುತ್ತದೆ. ಅಜ್ಞಾನ ನಿವೃತ್ತಿಯು ಅಜ್ಞಾನದ ಕಾರ್ಯವಲ್ಲ, ಅಜ್ಞಾನದ ಕಾರ್ಯವಾದರೆ ಅದೂ ಕೂಡ ಸದಸದ್ವಿಲಕ್ಷಣ ಎಂದೇ ಹೇಳಬೇಕಾಗುತ್ತದೆ. ಹಾಗೆ ಹೇಳಿದರೆ ಧ್ವಂಸ ಮತ್ತು ಅದರ ಪ್ರತಿಯೋಗಿಗಳಿಗೆ ಭಿನ್ನಸತ್ತಾಕತ್ವ ನಿಯಮವಿರುವುದರಿಂದ ಮತ್ತು ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಅಜ್ಞಾನದ ಕಾರ್ಯವೇ ಆದರೆ ಅದೂ ಕೂಡ ಅಜ್ಞಾನದ ಅಥವಾ ಅಜ್ಞಾನದ ಕಾರ್ಯವಾದ ಜಗತ್ತಿನಂತೆ ಸದಸದ್ವಿಲ್ಲಣವೇ ಎಂದು ಹೇಳಬೇಕು, ಯಾವುದು ಸದಸದ್ವಿಲಕ್ಷಣವೋ ಅದು ಮಿಥ್ಯಾ ಎಂದು ಮಾಯಾವಾದಿಯ ಮತವು. ಆದ್ದರಿಂದ ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಕೂಡ ಮಿಥ್ಯಾ ಎಂದು ಅವನು ಹೇಳ ಬೇಕು ಆಗ ಅವನಿಗೆ ಅಪಸಿದ್ಧಾಂತ ಬರುತ್ತದೆ ಎಂದು ನಾವು ಹೇಳಿದಾಗ ಅಪಸದ್ಧಾಂತ ದೋಷ ವನ್ನು ನನಗೆ ಹೇಳಬೇಡಿ ಎನ್ನುತ್ತಾನೆ. ಏಕೆಂದರೆ ಅವನು ಅಜ್ಞಾನ ನಿವೃತ್ತಿ ಮೋಕ್ಷವನ್ನು ಸದಸದ್ವಿಲಕ್ಷಣವಿಲಕ್ಷಣ ಎಂದು ಹೇಳುತ್ತಾನೆ ಅಂದರೆ ಅಜ್ಞಾನ ನಿವೃತ್ತಿ ಮೋಕ್ಷದಲ್ಲಿ ಸದಸದ್ವಿ ಲಕ್ಷಣ ವಿಲಕ್ಷಣತ್ವ ಎಂಬ ಐದನೆಯ ಲಕ್ಷಣವನ್ನು ಅಂಗೀಕಾರ ಮಾಡುತ್ತಾನೆ, ಇದರಿಂದಾಗಿ ನಾವು ಮೇಲೆ ಹೇಳಿದ ನಾಲ್ಕು ದೋಷಗಳು ಬರುವುದಿಲ್ಲ.

ಈ ರೀತಿ ಐದನೆಯ ಧರ್ಮವನ್ನು ಅಂಗೀಕಾರ ಮಾಡಬೇಕು ಎನ್ನುವ ವಿಷಯದಲ್ಲಿ ಏನು ಪ್ರಮಾಣವಿದೆ ಎಂದು ಕೇಳಿದರೆ ಅದಕ್ಕೆ ಪ್ರಮಾಣವನ್ನು ಹೇಳುತ್ತಾನೆ — 'ನ ಸನ್ನಾಸನ್ನ ಸದಸನ್ನಾನಿರ್ವಾಚ್ಯಸ್ತ ತತ್ಕ್ಷಯಃ । ಯುಕ್ತಾನುರೂಪೋ ಬಲಿರಿತ್ಯಾಚಾರ್ಯಾಃ ಪ್ರತ್ಯಪೀಪದನ್ " ಇತಿ । " ಅದ್ವೈತಾಚಾರ್ಯರು ಏನು ಹೇಳಿದ್ದಾರೆಂದರೆ ಅಜ್ಞಾನ ವಿಲಕ್ಷಣ ನಾಶವು ಸತ್ಯವಲ್ಲ, ಅಸತ್ಯವಲ್ಲ, ಸದಸತ್ಯವೂ ಅಲ್ಲ, ಸದಸದ್ವಿಲಕ್ಷಣವೂ ಅಲ್ಲ ಹಾಗಾದರೆ ಏನು ಎಂದರೆ ಸದಸದ್ವಿಲಕ್ಷಣ ಎಂದು ಅಭಿಪ್ರಾಯ. ಏಕೆಂದರೆ ಲೋಕವಲ್ಲಿ ಭೂತವು ಸಣ್ಣದಾಗಿದ್ದರೆ ಸ್ವಲ್ಪ ಬಲಿಯಿಂದ ತೃಪ್ತವಾಗುತ್ತದೆ, ಅದರೆ ಭೂತವು ದೊಡ್ಡದಾಗಿದ್ದರೆ ಅದಕ್ಕೆ ತೃಪ್ತಿಯಾಗುವ ಹಾಗೆ ಬಹಳವಾದ ಬಲಿಯನ್ನು ಹಾಕಬೇಕು. ಏಕೆಂದರೆ ದೊಡ್ಡ ಭೂತವು ಸ್ವಲ್ಪ ಬಲಿಯಿಂದ ತೃಪ್ತನಾಗುವುದಿಲ್ಲ. ಇದು ಹೇಗೆ ಲೋಕವಲ್ಲಿ ಕಂಡಿರುವುದೋ ಅದರಂತೆಯೇ ಪ್ರಕೃತ ಅಜ್ಞಾನ ನಿವೃತ್ತಿ ಎಂಬ ಪದಾರ್ಥಕ್ಕೆ ಸತ್ವಾದಿ ನಾಲ್ಕು ಧರ್ಮಗಳು ಕೂಡುವುದಿಲ್ಲವಾದ್ದರಿಂದ ಸದಸದ್ವಿಲಕ್ಷಣದಿಲಕ್ಷಣ ಎಂಬ ಐದನೆಯಧರ್ಮವನ್ನು ಒಪ್ಪಬೇಕು ಎಂದು ಅಭಿಪ್ರಾಯ,

ಈ ಮೇಲಿನ ವಿಷಯದಲ್ಲಿ ಉತ್ತರವನ್ನು ಹೇಳುತ್ತಾರೆ ಶ್ರೀಮದಾಚಾರ್ಯರು—

**ಮೂಲ :—** "ಅಜ್ಞಾನಾಸಂಭವೇನ ಚತುರ್ಥಪ್ರಕಾರಾಭಾವಾತ್ಪಂಚಮ ಪ್ರಕಾರತಾಽಪಿ ನಿರಸ್ತಾ"

**ಟೀಕಾ :—** ಮೋಕ್ಷಸ್ಯೇತ್ಯನುವರ್ತತೇ ।

**ಪ್ರತಿಪದಾರ್ಥ :—** ಅಜ್ಞಾನಾಸಂಭವೇನ=ಅಜ್ಞಾನವು ಕೂಡುವುದಿಲ್ಲವಾದ್ದರಿಂದ (ಆ ಅಜ್ಞಾನಕ್ಕೆ ಅಥವಾ ಆ ಅಜ್ಞಾನದ ಕಾರ್ಯಕ್ಕೆ), ಚತುರ್ಥಪ್ರಕಾರಾಭಾವಾತ್=ನಾಲ್ಕನೆ ಧರ್ಮವಾದ ಸದಸದ್ವಿಲಕ್ಷಣವೂ ಕೂಡುವುದಿಲ್ಲ ವಾದ್ದರಿಂದ, ಪಂಚಮ ಪ್ರಕಾರತಾಪಿ=ಐದನೆ ಧರ್ಮವಾದ ಸದಸದ್ವಿಲಕ್ಷಣ ವಿಲಕ್ಷಣವೂ ಕೂಡ, ನಿರಸ್ತಾ=ನಿರಾಕರಣ ಮಾಡಲ್ಪಟ್ಟಿತು.

**ಟೀಕಾ :—** [ಮೋಕ್ಷಸ್ಯ ಇತಿ=ಮೋಕ್ಷಕ್ಕೆ ಎಂಬ ಪದವು, ಅನುವರ್ತತೇ=ಅನುಸರಿಸಿ ಬರುತ್ತಥ.]

**ಭಾವಾರ್ಥ :—** ಮಾಯಾವಾದಿಯ ಮತದಲ್ಲಿ ಅಜ್ಞಾನವು ಕೂಡುವುದಿಲ್ಲವಾದ್ದರಿಂದ, ಅಜ್ಞಾನ ನಿಮಿತ್ತವಾದಂತಹ ಸದಸದ್ವಿಲಕ್ಷಣತ್ವವೆಂಬ ನಾಲ್ಕನೆ ಧರ್ಮವೇ ಅಯುಕ್ತವಾದ್ದರಿಂದ ಸದಸದ್ವಿಲಕ್ಷಣವಿಲಕ್ಷಣವೆಂಬ ಐದನೆ ಧರ್ಮವನ್ನು ಮೋಕ್ಷಕ್ಕೆ ಹೇಳಲು ಬರುವುದಿಲ್ಲ ಎಂಬ ಶ್ರೀಮದಾಚಾರ್ಯರ ಅಭಿಪ್ರಾಯವನ್ನು ಶ್ರೀಮಟ್ಟೀಕಾಕೃತ್ಪಾದರು ಹೇಳುತ್ತಿದ್ದಾರೆ.

**ಟೀಕಾ :—** ಅಜ್ಞಾನಸ್ಯ ನ ಸತ್ವಂ ಅದ್ವೈತ ಭಂಗಾತ್ । ನಾಪ್ಯಸತ್ಯಮ್ । ಪ್ರತೀತಿ ವಿರೋಧಾತ್ । ನ ಚ ಸದಸತ್ವಮ್ । ವಿರೋಧಾತ್ । ಅತಶ್ಚತುರ್ಥಪ್ರಕಾರತ್ವಮಂಗೀಕರ್ಯಮ್ । ನ ಚ ತನ್ನಿವೃತ್ತಿರಪಿ ತಾದೃಶೀ ಸಂಭವತೀತ್ಯೇವಂ ಮೋಕ್ಷಸ್ಯ ಪಂಚಮ ಪ್ರಕಾರತಾ ಪರೇಣಾಭ್ಯುಪಗತಾ । ಸ್ಯಾದಿಯಂ ಯದ್ಯಜ್ಞಾನಮೇವ ಪರಮತೇ ಸ್ಯಾತ್ । ನ ಚ ತತ್ಸಂಭವತಿ ಸಿದ್ಧತ್ವಾತ್ಸ್ವರೂಪಸ್ಯೇತ್ಯಾದಿನಾ ತದಸಂಭವಸ್ಯ ಉಕ್ತತ್ವಾತ್ । ಅತೋಽಜ್ಞಾನಾಸಂಭವೇನ ಚತುರ್ಥಪ್ರಕಾರಸ್ಯ ಸುತರಾಮಾಭಾವಾತ್ ತೇನ ಕಲ್ಪ್ಯಮಾನಾ ಮೋಕ್ಷಸ್ಯ ಪಂಚಮಪ್ರಕಾರತಾಪಿ ಪೂರ್ವೋಕ್ತರೀತ್ಯೈವ ನಿರಸ್ತಾ ।

**ಪ್ರತಿಪದಾರ್ಥ :—** ಮೋಕ್ಷಸ್ಯ ಇತಿ=ಮೋಕ್ಷಕ್ಕೆ ಎಂಬ ಪದವು, ಅನುವರ್ತತೇ=ಅನುಸರಿಸಿ ಬರುತ್ತದೆ. ಅಜ್ಞಾನಸ್ಯ= =ಅಜ್ಞಾನಕ್ಕೆ, ಸತ್ವಂ ನ ಸತ್ವವು ಇಲ್ಲ, (ಏಕೆಂದರೆ) ಅದ್ವೈತಭಂಗಾತ್=ಅದ್ವೈತಹಾನಿ ಎಂಬ ದೋಷವು ಬರುವುದರಿಂದ, ನ ಅಪಿ ಅಸತ್ವಂ=(ಅಜ್ಞಾನಕ್ಕೆ) ಅಸತ್ವವು ಕೂಡುವುದಿಲ್ಲ. (ಏಕೆಂದರೆ) ಪ್ರತೀತಿ ವಿರೋಧಾತ್= ಅಜ್ಞಾನಕ್ಕೆ ಸತ್ವವನ್ನು ವಿಷಯೀಕರಿಸಿದ ಜ್ಞಾನದ ವಿರೋಧವು ಇರುವುದರಿಂದ. ನ ಚ ಸದಸತ್ವಂ=ಸದಸತ್ವ ಎಂಬ ಧರ್ಮವೂ ಇಲ್ಲ. (ಏಕೆಂದರೆ) ವಿರೋಧಾತ್=ಸತ್ವಾಸತ್ವಗಳಿಗೆ ಪರಸ್ಪರ ವಿರಹಾತ್ಮಕತ್ವ ಲಕ್ಷಣ ವಿರೋಧವು ಇರುವುದರಿಂದ. ಅತಃ=ಅದ್ದರಿಂದ, ಚತುರ್ಥ ಪ್ರಕಾರತ್ವಂ=ನಾಲ್ಕನೆ ಧರ್ಮವಾದಂತಹ ಅನಿರ್ವಚನೀಯತ್ವಂ=

ಸದಸದ್ವಿಲಕ್ಷಣತ್ವ ಎಂಬ ಧರ್ಮವು, ಅಂಗೀಕಾರ್ಯಃ=ಮಾಯಾವಾದಿಯಿಂದ ಅಂಗೀಕಾರ ಮಾಡಲ್ಪಡಬೇಕು, ತನ್ನಿವೃತ್ತಿರಪಿ=ತತ್=ಆ ಅಜ್ಞಾನದ. ನಿವೃತ್ತಿಃ ಅಪಿ=ನಾಶವೂ ಕೂಡ, ತಾದೃಶೀ=ಸದಸದ್ವಿಲಕ್ಷಣತ್ವ ಎಂಬ ಧರ್ಮವುಳ್ಳದ್ದು. ನ ಚ ಸಂಭವತಿ=ಆಗುವುದಿಲ್ಲ. ಇತ್ಯೇವಂ=ಈ ರೀತಿಯಾಗಿ, ಮೋಕ್ಷಸ್ಯ=ಮೋಕ್ಷಕ್ಕೆ, ಪಂಚಮ ಪ್ರಕಾರತಾ=ಐದನೆಯದಾದ ಸದಸದ್ವಿಲಕ್ಷಣವಿಲಕ್ಷಣತ್ವ ಎಂಬ ಧರ್ಮವು, ಪರೇಣ=ಮಾಯಾವಾದಿಯಿಂದ, ಅಭ್ಯುಪಗತಾ=ಅಂಗೀಕಾರ ಮಾಡಲ್ಪಟ್ಟಿವೆ. ಯದಿ=ಒಂದು ವೇಳೆ. ಅಜ್ಞಾನಮೇವ=ಅಜ್ಞಾನವೇ, ಪರಮತೆ ಸ್ಯಾತ್=ಮಾಯಾವಾದಿ ಮತದಲ್ಲಿ ಯುಕ್ತವಾಗದಿದ್ದರೆ, ಇಯಂ=ಈ ಸತ್ವಾದಿ ಧರ್ಮ ವ್ಯವಸ್ಥೆಯು, ಸ್ಯಾತ್=ಆಗಬಹುದಿತ್ತು. ತತ್=ಅಜ್ಞಾನವೆಂಬ ಧರ್ಮವೇ ನ ಚ ಸಂಭವತಿ=ಯುಕ್ತವಾಗುವುದಿಲ್ಲ. ಸಿದ್ಧತ್ವಾತ್ಸ್ವರೂಪಸ್ಯ ಇತ್ಯಾದಿನಾ=ಸಿದ್ಧತ್ವಾತ್ಸ್ವರೂಪಸ್ಯ ಎಂಬ ಮೊದಲಾದ ಶ್ರೀಮದಾಚಾರ್ಯರ ಗ್ರಂಥದಿಂದ, ತದಸಂಭವಸ್ಯ=ಆ ಅಯುಕ್ತತೆಗೆ, ಉಕ್ತತ್ವಾತ್=ವಚನ ವಿಷಯತ್ವವು ಇರುವುದರಿಂದ. ಅತಃ=ಆದ್ದರಿಂದ. ಅಜ್ಞಾನಾ ಸಂಭವೇನ=ಅಜ್ಞಾನವೆಂಬ ಪದಾರ್ಥವೇ ಕೂಡುವುದಿಲ್ಲವಾದ್ದರಿಂದ, ಚತುರ್ಥ ಪ್ರಕಾರಸ್ಯ=ನಾಲ್ಕನೆ ಧರ್ಮದ, ಸುತರಾಮ್=ಅತ್ಯಂತವಾದ, ಅಭಾವಾತ್=ಅಭಾವವು ಇರುವುದರಿಂದ, ತೇನ=ಆ ನಾಲ್ಕನೆ ಧರ್ಮದಿಂದಾಗಿ, ಮೋಕ್ಷಸ್ಯ= ಅಜ್ಞಾನ-ನಿವೃತ್ತಿ ಎಂಬ ಮೋಕ್ಷಕ್ಕೆ, ಕಲ್ಪ್ಯಮಾನಾ=ನಿನ್ನ ಕಲ್ಪನಾ ವಿಷಯವಾದಂತಹ, ಪಂಚಮ ಪ್ರಕಾರತಾಽಪಿ=ಐದನೆ ಧರ್ಮವಾದ ಸದಸದ್ವಿಲಕ್ಷಣ ವಿಲಕ್ಷಣತ್ವವೂ ಕೂಡ. ಪೂರ್ವೋಕ್ತರೀತ್ಯೈವ=ಈಗಾಗಲೆ ಹೇಳಿದಂತೆ, ನಿರಸ್ತಾ=ನಿರಾಕರಣ ಮಾಡಲ್ಪಟ್ಟಿತು.

ಭಾವಾರ್ಥ :—ಮಾಯಾವಾದಿಯಾದ ನೀನು ಅಜ್ಞಾನವು ಸತ್ಯ ಎಂದು ಹೇಳಿದರೆ ಸತ್ಯವಸ್ತುದ್ವಯವಾಗುತ್ತದೆ. ಆಗ ಅದ್ವೈತಹಾನಿ ಎಂಬ ದೋಷವು ಬರುತ್ತದೆ. ಅಜ್ಞಾನವು ಅಸತ್ವ ಎಂದು ಹೇಳಿದರೆ "ಅಸಚ್ಚೇತ್ ನ ಪ್ರಕಾಶ್ಯೇಯತ್" ಎಂಬ ಯುಕ್ತಿಯು ಇಟ್ಟುಕೊಂಡರೆ ಆಗ ಅಜ್ಞಾನವು ಅಸತ್ತಾದರೆ **ಜ್ಞಾನ ವಿಷಯವೇ** ಆಗೇವುದಿಲ್ಲ. ಈಗ ಅಜ್ಞಾನವು ಜ್ಞಾನ ವಿಷಯುವಾಗಿದೆ. ಆದ್ದರಿಂದ ಅಸತ್ತಾಗಲಾರದು ಎಂಬ ಅಭಿಪ್ರಾಯದಿಂದ ಅಸತ್ತನ್ನು ಅಂಗೀಕರಿಸುವುದಿಲ್ಲ, ಸತ್ವ ಮತ್ತು ಅಸತ್ವ ಎಂಬ ಎರಡು ಧರ್ಮಗಳನ್ನು ಅಜ್ಞಾನಕ್ಕೆ ಅಂಗೀಕರಿಸುವುದಿಲ್ಲ. ಏಕೆಂದರೆ ಈ ಎರಡು ಧರ್ಮಗಳು ಪರಸ್ಪರ ವಿರುದ್ಧವಾಗಿದ್ದು ಏಕತ್ರ ಇರಲು ಶಕ್ಯವಿಲ್ಲ, ಆದ್ದರಿಂದ ಅಜ್ಞಾನಕ್ಕೆ ಸತ್ವ ಸದಸತ್ವ ಅಸತ್ವ ಎಂಬ ಧರ್ಮಗಳು ಕೂಡುವುದಿಲ್ಲವಾದ್ದರಿಂದ ನಾಲ್ಕನೆ ಧರ್ಮವಾದಂತಹ ಅನಿರ್ವಚನೀಯತ್ವ ಅಂದರೆ ಸದಸದ್ವಿಲಕ್ಷಣತ್ವ ಎಂಬ ಧರ್ಮವನ್ನು ಅಂಗೀಕರಿಸುವಿ. ಹೀಗೆ ಸದಸದ್ವಿಲಕ್ಷಣತ್ವ ಎಂಬ ಧರ್ಮವನ್ನು ಹೇಳಿದ್ದರಿಂದ ಅಜ್ಞಾನ ನಿವೃತ್ತಿ ಮೋಕ್ಷಕ್ಕೂ ಸಹ ಸದಸದ್ವಿಲಕ್ಷಣತ್ವ ಎಂಬ ಧರ್ಮವನ್ನು ಹೇಳಲು ಶಕ್ಯವಿಲ್ಲ. ಏಕೆಂದರೆ ಪದಾರ್ಥ (ಪ್ರತಿಯೋಗಿ) ಮತ್ತು ಅದರ ಧ್ವಂಸಕ್ಕೆ ಬೇರೆ ಬೇರೆ ಸತ್ವವನ್ನು ಶಾಸ್ತ್ರಕಾರರು ಒಪ್ಪಿದ್ದಾರೆ.

**ಉದಾಹರಣೆಗೆ**—ಘಟ ಮತ್ತು ಘಟಧ್ವಂಸ ಇವುಗಳಿಗೆ ಒಂದೇ ರೀತಿಯ ಸತ್ವವನ್ನು ಹೇಳಿದರೆ, ಅಂದರೆ ಘಟದ ಸತ್ವವೇ ಘಟದ ಧ್ವಂಸದಲ್ಲಿದೆ, ಘಟದ ಧ್ವಂಸ ಸತ್ವವೇ ಘಟದಲ್ಲಿದೆ ಎಂದು ಹೇಳಿದರೆ ಘಟ ಮತ್ತು ಘಟ ಧ್ವಂಸಗಳಿಗೆ ಅಭೇದವನ್ನು ಹೇಳುವ ಪ್ರಸಂಗವು ಬರುವುದರಿಂದ ಅದು ಯುಕ್ತಿ ವಿರುದ್ಧವಾಯಿತು. ಆದ್ದರಿಂದ ಪದಾರ್ಥ ಮತ್ತು ಪದಾರ್ಥ ಧ್ವಂಸಗಳಿಗೆ ಬೇರೆ ಬೇರೆ ಸತ್ವವನ್ನು ಹೇಳುವುದು ಶಾಸ್ತ್ರಸಮ್ಮತವಾಗಿದೆ. ಅದರಂತೆಯೇ ಪ್ರಕೃತ ಅಜ್ಞಾನಕ್ಕೂ ಅಜ್ಞಾನ ನಿವೃತ್ತಿ ಎಂಬ ಮೋಕ್ಷಕ್ಕೂ ಬೇರೆ ಬೇರೆ ಧರ್ಮವನ್ನು ಹೇಳಬೇಕಾಯಿತು. ಪ್ರಕೃತ ಅಜ್ಞಾನಕ್ಕೆ ಸದಸದ್ವಿಲಕ್ಷಣತ್ವ ರೂಪ ಧರ್ಮವನ್ನು ಮೇಲೆ ಹೇಳಿದ ರೀತಿಯಲ್ಲಿ ನೀನು ಅಂಗೀಕರಿಸುವುದರಿಂದ ಅಜ್ಞಾನ ನಿವೃತ್ತಿ ಎಂಬ ಮೋಕ್ಷಕ್ಕೆ ಐದನೆಯ ಧರ್ಮವನ್ನು ಅಂಗೀಕರಿಸಬೇಕು, ಆದರೆ ಈ ಐದನೆಯ ಧರ್ಮವಾದ ಸದಸದ್ವಿಲಕ್ಷಣ ವಿಲಕ್ಷಣತ್ವವೂ ಸಹ ಯುಕ್ತವಾಗುವುದಿಲ್ಲ. ಏಕೆಂದರೆ ನಾಲ್ಕನೇ ಧರ್ಮವಾದ

ಸದಸದ್ವಿಲಕ್ಷಣತ್ವವು ಇದ್ದರೆ ಮಾತ್ರ ಐದನೆಯ ಧರ್ಮವಾದ ಸದಸದ್ವಿಲಕ್ಷಣವಿಲಕ್ಷಣತ್ವ ರೂಪ ಧರ್ಮವು ಇರುತ್ತದೆ. ಹೇಗೆಂದರೆ ಐದನ ರಸವು ಇರುವುದರಿಂದ ಆರನೆಯ ರಸವು ಇದೆ ಎಂದು ಹೇಳಬಹುದು. ಆದರೆ ಏಳನೆಯ ರಸವು ಇದೆ ಎಂದು ಯಾರೂ ಅಂಗೀಕರಿಸುವುದಿಲ್ಲ, ಹೀಗಿರುವಾಗ ಎಂಟನೆ ರಸವು ಇದೆ ಎಂದು ಹೇಳಲು ಹೇಗೆ ಬರುವುದಿಲ್ಲವೋ ಹಾಗೆಯೇ ನಿನ್ನ ಮತರೀತ್ಯಾ ಅಜ್ಞಾನವೇ ಕೂಡುವುದಿಲ್ಲ ಎಂದು ನಾವು ಈಗಾಗಲೇ ಸಮರ್ಥಿಸಿದ್ದೇವೆ ಹೀಗೆ ಅಜ್ಞಾನವು ಅಯುಕ್ತವಾದ್ದರಿಂದ ಅಜ್ಞಾನಕಾರಣಕವಾದ ಸದಸದ್ವಿಲಕ್ಷಣತ್ವವೆಂಬ ಧರ್ಮವೇ ಅಯುಕ್ತವಾಗಿರುವುದರಿಂದ ನೀನು ಮೋಕ್ಷಕ್ಕೆ ಕಲ್ಪಿಸಿದಂತಹ ಸದಸದ್ವಿಲಕ್ಷಣ ವಿಲಕ್ಷಣತ್ವವೆಂಬ ಧರ್ಮವು ಅತ್ಯಂತ ಅಯುಕ್ತವಾಯಿತು.

ರೀತ್ಯಂತರದಿಂದ ಸದಸದ್ವಿಲಕ್ಷಣವಿಲಕ್ಷಣತ್ವವೆಂಬ ಪ್ರಕಾರವು ಅಯುಕ್ತವಾಗಿದೆ ಎಂದು ಸಮರ್ಥಿಸುತ್ತಾರೆ, ಶ್ರೀಮಟ್ಟೀಕಾಕೃತ್ಪಾದರು ಅಥವಾ ಎಂಬ ಗ್ರಂಥದಿಂದ :—

**ಟೀಕಾ :—** ಅಥವಾ ಅಜ್ಞಾನ ನಿವೃತ್ತಿರ್ಯದಾತ್ಮಾತಿರಿಕ್ತಾ ಪಂಚಮ ಪ್ರಕಾರೋರರೀಕ್ರಿಯತೇ ತದಾ ವಕ್ತವ್ಯಂ ಕಿಮಜ್ಞಾನಕಾರ್ಯಂ ನ ವಾ ? ಇತಿ । ನ ದ್ವಿತೀಯಃ । ಆತ್ಮಾತಿರಿಕ್ತಸ್ಯಾಜ್ಞಾನ ತತ್ಕಾರ್ಯಯೋರನ್ಯತರತ್ವಸ್ಯಾವಶ್ಯಂಭಾವಾಭ್ಯುಪಗಮಾತ್ । ಆದ್ಯೇ ಬಾಧಕಮಾಹ ಅಜ್ಞಾನಾಸಂಭವೇನೇತಿ । ಯದ್ಯಜ್ಞಾನನಿವೃತ್ತಿರಜ್ಞಾನಕಾರ್ಯಾ ತದಾ ಅಜ್ಞಾನಸ್ಯ ಅವಸ್ಥಾನಂ ಸ್ಯಾತ್ । ನಹ್ಯುಪದಾನೇನ ವಿನೋಪಾದೇಯಸ್ಯ ಸ್ಥಿತಿರಸ್ತಿ । ಅಜ್ಞಾನ ನಿವೃತ್ತೌ ಅಜ್ಞಾನಾಸಂಭವಾತ್ । ತಥಾ ಚ ಅಜ್ಞಾನ ನಿವೃತ್ತೇರುಭಯಥಾಪ್ಯ ಸಂಭವೇನ ಸ್ವರೂಪಮೇವ ನಾಸ್ತಿ । ಪಂಚಮ ಪ್ರಕಾರತಾ ದೂರನಿರಸ್ತೇತಿ ।

**ಪ್ರತಿಪದಾರ್ಥ :—** ಅಥವಾ ಇನ್ನೊಂದು ರೀತಿ ಏಕೆಂದರೆ ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಯದಿ=ಒಂದು ವೇಳೆ, ಆತ್ಮಾತಿರಿಕ್ತಾ=ಆತ್ಮನ ದೆಸೆಯಿಂದ ಭಿನ್ನವಾದಂತಹುದು (ಮತ್ತು), ಪಂಚಮ ಪ್ರಕಾರಃ = ಐದನೆಯ ಧರ್ಮವುಳ್ಳದ್ದು ಇತಿ=ಇಂತೆಂದು, ಉರರೀಕ್ರಿಯತೇ = ಪ್ರತಿಪಾದಿಸಲ್ಪಟ್ಟರೇ, ತದಾ=ಆಗ (ಈ ಅಜ್ಞಾನ ನಿವೃತ್ತಿ ಎಂಬ ಮೋಕ್ಷವು), ಕಿಂ ಅಜ್ಞಾನ ಕಾರ್ಯಂ=ಅಜ್ಞಾನ ಕಾರ್ಯವಾಗಿದೆಯೋ, ನ ವಾ ?=ಇಲ್ಲವೊ. ಇತಿ =ಇಂತೆಂದು, ವಕ್ತವ್ಯಂ=ಹೇಳಲು ಯೋಗ್ಯವಾಗಿದೆ ! ದ್ವಿತೀಯಃ=ಅಜ್ಞಾನ ನಿವೃತ್ತಿಯು ಅಜ್ಞಾನದ ಕಾರ್ಯವಲ್ಲ ಎಂಬ ಎರಡನೆ ಪಕ್ಷವು, ನ=ಯುಕ್ತವಲ್ಲ (ಏಕೆಂದರೆ) ಆತ್ಮಾತಿರಿಕ್ತಸ್ಯ=ಆತ್ಮನ ದೆಸೆಯಿಂದ ಭಿನ್ನವಾದ ಪ್ರಪಂಚಕ್ಕೆ, ಅಜ್ಞಾನತತ್ಕಾರ್ಯಯೋಃ=ಅಜ್ಞಾನತ್ವ ಅಥವಾ ಅಜ್ಞಾನ ಕಾರ್ಯತ್ವ ಇವೆರಡರ ಮಧ್ಯದಲ್ಲಿ, ಅನ್ಯತರತ್ವಸ್ಯ ಅವಶ್ಯಂ=ಒಂದರ ಅತ್ಯಂತ ಅವಶ್ಯವಾಗಿರುವಿಕೆಯನ್ನು, ಅಭ್ಯುಪಗಮಾತ್=ಅಂಗೀಕರಿಸುವುದರಿಂದ ಆದ್ಯೇ=ಅಜ್ಞಾನ ನಿವೃತ್ತಿ ಮೋಕ್ಷವು ಅಜ್ಞಾನ ಕಾರ್ಯವಾಗಿದೆ ಎಂಬ ಮೊದಲನೆ ಪಕ್ಷವನ್ನು ಅಂಗೀಕರಿಸಿದರೆ, ಬಾಧಕಂ=ಬಾಧಕವನ್ನು (ಪ್ರಮಾಣ ವಿರೋಧವನ್ನು) ಆಹ=ಹೇಳುತ್ತಾರೆ, ಅಜ್ಞಾನಾಸಂಭವೇನೇತಿ="ಅಜ್ಞಾನಾ ಸಂಭವೇನ" ಎಂಬ ಗ್ರಂಥದಿಂದ ಯದಿ=ಒಂದು ವೇಳೆ, ಅಜ್ಞಾನ ನಿವೃತ್ತಿಃ=ಅಜ್ಞಾನ ನಿವೃತ್ತಿ ಎಂಬ ಮೋಕ್ಷವು, ಅಜ್ಞಾನ ಕಾರ್ಯಾ=ಅಜ್ಞಾನದ ಕಾರ್ಯವಾದರೆ, ತದಾ=ಆಗ, ಅಜ್ಞಾನಸ್ಯ=ಅಜ್ಞಾನಕ್ಕೆ, ಅವಸ್ಥಾನಂ=ಸ್ಥಿತಿಯು ಸ್ಯಾತ್=ಇರಬೇಕಾಗುತ್ತದೆ. (ಏಕೆಂದರೆ) ಉಪಾದಾನೇನ ವಿನಾ=ಉಪಾದಾನ ಕಾರಣವನ್ನು ಬಿಟ್ಟು. ಉಪಾದೇಯಸ್ಯ=ಉಪಾಧೇಯ ಪದಾರ್ಥಕ್ಕೆ, ಸ್ಥಿತಿಃ ಸ್ಥಿತಿಯು ನ ಹಿ ಅಸ್ತಿ=ಇರುವುದಿಲ್ಲ । ಅಜ್ಞಾನ ನಿವೃತ್ತೌ=ಅಜ್ಞಾನವು ನಾಶವಾಗುತ್ತಿರಲು, ಅಜ್ಞಾನಾ ಸಂಭವಾತ್ = ಅಜ್ಞಾನ ಕೂಡುವುದಿಲ್ಲವಾದ್ದರಿಂದ ತಥಾ ಚ = ಆದರಿಂದ, ಅಜ್ಞಾನ ನಿವೃತ್ತೇಃ=ಅಜ್ಞಾನ ನಿವೃತ್ತಿ ಎಂಬ ಮೋಕ್ಷಕ್ಕೆ ಉಭಯಥಾಪಿ = ಅಜ್ಞಾನ ಕಾರ್ಯತ್ವ ಅಥವಾ ಅಜ್ಞಾನ

ಕಾರ್ಯತ್ವಾಭಾವ ಇವೆರಡರಲ್ಲಿ ಯಾವುದೇ ಒಂದನ್ನು ಅಂಗೀಕರಿಸಿದರೂ ಕೂಡ ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಯುಕ್ತವಾಗುವುದಿಲ್ಲವಾದ್ದರಿಂದ, ಸ್ವರೂಪಮೇವ ನಾಸ್ತಿ = ಸ್ವರೂಪವೇ ಇಲ್ಲ । ಪಂಚಮ ಪ್ರಕಾರತಾ = (ಈ ಮೇಲೆ ಹೇಳಿದಂತಹ ಅಯುಕ್ತವಾದ ಅಜ್ಞಾನ ನಿವೃತ್ತಿ ಎಂದು ಮೋಕ್ಷಕ್ಕೆ ಸದಸದ್ವಿಲಕ್ಷಣವಿಲಕ್ಷಣತ್ವ ಎಂಬ) ಐದನೆಯ ಧರ್ಮವಂತೂ, ದೂರನಿರಸ್ತಾ = ದೂರದಲ್ಲಿಯೇ ನಿರಾಕರಣ ಮಾಡಲ್ಪಟ್ಟಿತು, ಇತಿ = ಇಂತೆಂದು (ಮಾಯಾವಾದಿಯನ್ನು ಕುರಿತು ಹೇಳತಕ್ಕದ್ದು),

**ಭಾವಾರ್ಥ :–** ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಆತ್ಮನ ದೆಸೆಯಿಂದ ಭಿನ್ನ ಎಂದು ಹೇಳಿ ಆ ದೋಷಕ್ಕೆ ಐದನೆಯ ಧರ್ಮ. ನ್ನು ಅಂಗೀಕರಿಸುತ್ತೇನೆ ಎಂದು ಮಾಯಾವಾದಿಯು ಹೇಳಿದರೆ ನಾವು ಪ್ರಶ್ನೆ ಕೇಳುತ್ತೇವೆ ; ಅದೇನೆಂದರೆ ಈ ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಅಜ್ಞಾನ ಕಾರ್ಯ (ಸಕ್ಕರೆಯಿಂದ ಮಾಡಲ್ಪಟ್ಟ ಗೊಂಬೆಯಂತೆ) ಅಜ್ಞಾನೋ ಪಾದಾನಕವು ಆಗಿರುವುದೋ ಇಲ್ಲವೊ । ಎರಡನೆ ಪಕ್ಷವಾದಂತಹ ಅಜ್ಞಾನೋಪಾದಾನಕವಲ್ಲ ಎಂಬುದನ್ನು ಅಂಗೀಕರಿಸಲು ಬರುವುದಿಲ್ಲ. ಏಕೆಂದರೆ ಆತ್ಮನ ದೆಸೆಯಿಂದ ಭಿನ್ನವಾದ ಸಕಲ ಪದಾರ್ಥಗಳು ಅಜ್ಞಾನ ರೂಪವಾಗಿದೆ ಅಥವಾ ಅಜ್ಞಾನೋಪಾದಾನಕವೇ ಆಗಿದೆ ಎಂದು ನೀನು ಅಂಗೀಕಾರ ಮಾಡಿರುವಿ. ಪ್ರಕೃತದಲ್ಲಿ ಆತ್ಮನ ದೆಸೆಯಿಂದ ಭಿನ್ನ ಎಂದು ಹೇಳಲ್ಪಟ್ಟಂತಹ ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಅಜ್ಞಾನ ರೂಪವಂತೂ ಆಗಲು ಶಕ್ಯವಿಲ್ಲ. ಏಕೆಂದರೆ ಘಟದ ನಿವೃತ್ತಿಯು ಘಟದ ರೂಪವಾಗಬಹುದೆ? ಅದರಂತೆಅಜ್ಞಾನ ನಿವೃತ್ತಿಯು ಅಜ್ಞಾನರೂಪವಾಗಿಲ್ಲವಾದ್ದರಿಂದ ಅಜ್ಞಾನ ಕಾರ್ಯ ಎಂದು ಒಪ್ಪಿರುವಿ. ಈಗ ಅಜ್ಞಾನ ನಿವೃತ್ತಿಯಂ ಅಜ್ಞಾನ ಕಾರ್ಯವಲ್ಲ ಎಂದು ಹೇಳಿದರೆ ಅಪಸಿದ್ಧಾಂತವು ಬರುತ್ತದೆ,

ಇನ್ನು ಅಜ್ಞಾನ ನಿವೃತ್ತಿಗೆ ಅಜ್ಞಾನ ಕಾರ್ಯತ್ವವನ್ನು ಹೇಳುತ್ತೇನೆ ಎಂಬ ಎರಡನೆ ಪಕ್ಷವನ್ನು ಅಂಗೀಕರಿಸಿದರೆ ಅಜ್ಞಾನ ನಿವೃತ್ತಿ ಎಂಬ ಮೋಕ್ಷದ ಕಾಲದಲ್ಲಿ ಆ ಮೋಕ್ಷಕ್ಕೆ ಉಪಾದಾನ ಕಾರಣವಾದ ಅಜ್ಞಾನವೂ ಕೂಡ ಇರುತ್ತದೆ ಎಂದು ಅಂಗೀಕರಿಸಲೇಬೇಕು. ಹೇಗೆ ಉಪಾದಾನ ಕಾರಣವಾದ ಸಕ್ಕರೆಯನ್ನು ಬಿಟ್ಟು ಉಪಾದೇಯವಾದ ಸಕ್ಕರೆಯ ಬೊಂಬೆಯು ಇರಲು ಶಕ್ಯವಿಲ್ಲವೋ ಅದರಂತೆಯೇ ಪ್ರಕೃತ ಉಪಾದಾನವಾದ ಅಜ್ಞಾನವನ್ನು ಬಿಟ್ಟು ಉಪಾದೇಯವಾದ ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಯುಕ್ತವಾಗಲಾರದು, ಇನ್ನು ಅಜ್ಞಾನ ನಿವೃತ್ತಿಯಾದ ಕಾಲದಲ್ಲಿ ಅಜ್ಞಾನವಿರಲು ಶಕ್ಯವಿಲ್ಲ, ಹೇಗೆ ಘಟದ ಧ್ವಂಸಾನಂತರ ಧ್ವಂಸ ಪ್ರತಿಯೋಗಿಯಾದ ಘಟವು ಇರುವುದಿಲ್ಲವೋ ಅದರಂತೆ ಅಜ್ಞಾನ ನಿವೃತ್ತಿಗೆ ಪ್ರತಿಯೋಗಿಯಾದ ಅಜ್ಞಾನವೂ ಸಹ ಅಜ್ಞಾನದ ನಿವೃತ್ತಿಯ ಕಾಲದಲ್ಲಿ ಇರಲಾರದು. ಅಜ್ಞಾನವು ಇರದಿದ್ದರೆ ಅಜ್ಞಾನೋಪಾದಾನಕವಾದ ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಇರಲು ಶಕ್ಯವಿಲ್ಲ : ಸಕ್ಕರೆ ಇಲ್ಲದಿದ್ದಾಗ ಸಕ್ಕರೆ ಬೊಂಬೆ ಇಲ್ಲದಂತೆ. ಹೀಗೆಯೇ ಅಜ್ಞಾನ ನಿವೃತ್ತಿ ಎಂಬ ಮೋಕ್ಷಕ್ಕೆ ಅಜ್ಞಾನ ರೂಪತ್ವವನ್ನು ಹೇಳಲು ಬರುವುದಿಲ್ಲವಾದ್ದರಿಂದ ಅಜ್ಞಾನ ಕಾರ್ಯತ್ವವನ್ನುಹೇಳಲು ಬರುವುದಿಲ್ಲವಾದ್ದರಿಂದ ಅಜ್ಞಾನ ನಿವೃತ್ತಿ ಎಂಬ ಮೋಕ್ಷವು ಇಲ್ಲ ಎಂದಂತಾಯಿತು. ಇಂತಹ ಮೋಕ್ಷವೇ ಇಲ್ಲದಿರುವಾಗ ಅದಕ್ಕೆ ಸದಸದ್ವಿಲಕ್ಷಣ ವಿಲಕ್ಷಣತ್ವ ಎಂಬ ಐದನೆ ಧರ್ಮವನ್ನು ಹೇಳುವುದಂತು ದೂರದಲ್ಲಿಯೇ ಖಂಡಿತವಾಯಿತು.

ಇನ್ನು ಸದಸದ್ವಿಲಕ್ಷಣವಿಲಕ್ಷಣತ್ವವೆಂಬ ಐದನೆಯ ಧರ್ಮವು ಇಲ್ಲ ಎಂದು ರೀತ್ಯಂತರದಿಂದ ಹೇಳುತ್ತಿದ್ದಾರೆ ಶ್ರೀಮದಾಚಾರ್ಯರು "ಚತುರ್ಥ ಪ್ರಕಾರಾಭಾವಾತ್" ಎಂಬ ಗ್ರಂಥದಿಂದ ಎನ್ನುವುದನ್ನು ವಿವರಿಸುತ್ತಿದ್ದಾರೆ ಶ್ರೀಮಟ್ಟೀಕಾಕೃತ್ಪಾದರು "ಕಿಂ ಚ" ಎಂಬ ಮುಂದಿನ ಗ್ರಂಥದಿಂದ—

**ಟೀಕಾ :—** ಕಿಂ ಚ ಘಟಾದೀನಾಂ ಸತ್ತ್ವಂ । ಶಶವಿಷಾಣಾದೀನಾಮಸತ್ತ್ವಂ । ಘಟಾದೀನಾಮೇವ ದೇಶಕಾಲಾದಿ ವ್ಯವಸ್ಥಯಾ ಸದಸತ್ತ್ವಮಿತಿ ಪ್ರಕಾರತ್ರಯಸ್ಯೈವಾನುಭವಾಚ್ಚತುರ್ಥಪ್ರಕಾರ ಏವನಾಸ್ತಿ । ತದಭಾವಾ

ತ್ಪಂಚಮಪ್ರಕಾರತಾ ತು ಮೋಕ್ಷಸ್ಯಾಷ್ಟಮರಸ ಇವ ಅತ್ಯಂತಾಸಂಭಾವಿನೀತ್ಯಾಹ — ಚತುರ್ಥ ಪ್ರಕಾರೇತಿ ।

**ಪ್ರತಿಪದಾರ್ಥ :—** ಕಿಂ ಚ=ಇಷ್ಟುಮಾತ್ರವಲ್ಲದೆ. ಘಟಾದೀನಾಂ=ಘಟಾದಿಗಳಿಗೆ ಸತ್ವಂ=ಸತ್ವವು (ಇರುತ್ತದೆ), ಶಶವಿಷಾಣಾದೀನಾಂ = ಮೊಲದ ಕೊಂಬು ಮೊದಲಾದವುಗಳಿಗೆ, ಅಸತ್ವಂ = ಅಸತ್ವವು (ಇರುತ್ತದೆ) । ಘಟಾದೀನಾಮೇವ=ಘಟಾದಿಗಳಿಗೇನೇ ದೇಶಕಾಲಾದಿವ್ಯವಸ್ಥಯಾ = ದೇಶಭೇದ ಕಾಲಭೇದ ವ್ಯವಸ್ಥೆಗೆ ಅನುಸರಿಸಿ ಸದಸತ್ವಮಿತಿ=ಸದಸತ್ವವೆಂಬ ಧರ್ಮವು ಇರುತ್ತದೆ. ಈ ರೀತಿ ಪ್ರಕಾರತ್ರಯಸ್ಯೈವ = (ಸತ್ವ. ಅಸತ್ವ ಸದಸತ್ವ ಎಂಬ) ಮೂರು ಧರ್ಮಗಳದೇ, ಅನುಭವಾತ್ (ಎಲ್ಲರಿಗೂ) ಅನುಭವವಿರುವುದರಿಂದ ಚತುರ್ಥ ಪ್ರಕಾರ ಏ =ಸದಸದ್ವಿಲಕ್ಷಣತ್ವವೆಂಬ ನಾಲ್ಕನೇ ಧರ್ಮವೇ ಇಲ್ಲ । ತದಭಾವಾತ್ = ನಾಲ್ಕನೇ ಧರ್ಮವಿಲ್ಲವಾದ್ದರಿಂದ ಮೋಕ್ಷಸ್ಯ—ಮೋಕ್ಷಕ್ಕೆ. ಪಂಚಮ ಪ್ರಕಾರತಾ ತು=ಐದನೇ ಪ್ರಕಾರವಂತು ಅಷ್ಟಮರಸ ಇವ=ಎಂಟನೇ ರಸದಂತೆ, ಅಂತ್ಯಂತಾಸಂಭಾವಿನೀ=ಅತ್ಯಂತವಾಗಿ ಅಪ್ರಮಾಣಕವಾಗಿದೆ, ಇತಿ ಈ ಅಭಿಪ್ರಾಯದಿಂದ ಹೇಳಿದ್ದಾರೆ ಶ್ರೀಮದಾಚಾರ್ಯರು "ಚತುರ್ಥಪ್ರಕಾರೇತಿ", "ಚತುರ್ಥ ಪ್ರಕಾರ" ಎಂಬ ಗ್ರಂಥದಿಂದ.

**ಭಾವಾರ್ಥ :—** ಲೋಕದಲ್ಲಿ ಘಟಾದಿ ಪದಾರ್ಥಗಳಲ್ಲಿ ಸತ್ವ ಎಂಬ ಧರ್ಮದ ಅನುಭವವಿದೆ. ಶಶವಿಷಾಣ, ರಜ್ಜು ಭುಜಂಗ ಇತ್ಯಾದಿಗಳಲ್ಲಿ ಅಸತ್ವ ಎಂಬ ಧರ್ಮವು ಅನುಭೂತವಾಗಿದೆ. ಘಟಾದಿಗಳಿಗೇನೆ ಸತ್ವಾಸತ್ವವು ಕೂಡುತ್ತದೆ. ಅದು ಹೇಗೆಂದರೆ ಘಟವು ಈ ದೇಶದಲ್ಲಿ ಈ ಕಾಲದಲ್ಲಿ ಸತ್ಯವಾದರೆ ಇವೇ ಕಾಲದಲ್ಲಿ ಬೇರೆ ದೇಶದಲ್ಲಿ ಅಸತ್ಯವಾಗಿರುತ್ತದೆ, ಅದರಂತೆಯೇ ಇನ್ನೊಂದು ಕಾಲದಲ್ಲಿ ಇದೇ ದೇಶದಲ್ಲಿ ಅಸತ್ಯವಾಗಿರುತ್ತದೆ, ಹೀಗೆ ದೇಶ ಕಾಲ ಭೇದದಿಂದ ಸತ್ವಾಸತ್ವವು ಕೂಡುತ್ತದೆ. ಹೀಗೆ ಮೂರು ಧರ್ಮಗಳ ಅನುಭವವು ಮಾತ್ರ ಇರುತ್ತದೆ ವಿನಹ ಸದಸದ್ವಿಲಕ್ಷಣತ್ವ ಎಂಬ ನಾಲ್ಕನೇ ಧರ್ಮದ ಅನುಭವವು ಯಾರಿಗೂ ಇಲ್ಲ. ಹೀಗೆ ನಾಲ್ಕನೇ ಧರ್ಮವೇ ಇಲ್ಲದಿರುವಾಗ ಐದನೆಯ ಧರ್ಮವಂತೂ ಅತ್ಯಂತ ಅಪ್ರಾಮಾಣಿಕವಾಗಿದೆ, ಅದು ಹೇಗೆಂದರೆ ಮಧುರಾದಿ ಆರು ರಸಗಳು ಪ್ರಸಿದ್ಧವಾಗಿವೆಯೇ ವಿನಹ ಏಳನೆ ರಸವು ಇಲ್ಲವೇ ಇಲ್ಲ. ಹೀಗೆ ಏಳನೇ ರಸವೇ ಇಲ್ಲದಿರುವಾಗ ಎಂಟನೇ ರಸವಂತು ಅತ್ಯಂತ ಅಪ್ರಾಮಾಣಿಕವಾಗಿದೆ. ಅದರಂತೆ ಈ ಸದಸದ್ವಿಲಕ್ಷಣವಿಲಕ್ಷಣತ್ವವೆಂಬ ಐದನೇ ಧರ್ಮವೂ ಸಹ ಅತ್ಯಂತ ಅಪ್ರಾಮಾಣಿಕ ಎಂದು ತಿಳಿಯತಕ್ಕದ್ದು ಎಂಬ ಅಭಿಪ್ರಾಯದಿಂದ ಶ್ರೀಮದಾಚಾರ್ಯರು "ಚತುರ್ಥ ಪ್ರಕಾರಾಭಾವಾತ್ ಪಂಚಮ ಪ್ರಕಾರತಾಽಪಿ ನಿರಸ್ತಾ" ಎಂದು ಹೇಳಿದ್ದಾರೆ, ಹೀಗೆ "ಅಜ್ಞಾನಾ ಸಂಭವೇನ" ಎಂಬ ಗ್ರಂಥದಿಂದ ಇಜ್ಞಾನ ನಿವೃತ್ತಿ ಎಂಬ ಮೋಕ್ಷ (ಧರ್ಮಿ) ಇಲ್ಲವಾದ್ದರಿಂದ ಆ ಮೋಕ್ಷದಲ್ಲಿ ಸದಸದ್ವಿಲಕ್ಷಣವಿಲಕ್ಷಣತ್ವ ಎಂಬ ಧರ್ಮವನ್ನು ಹೇಳಲು ಶಕ್ಯವಿಲ್ಲ ಎಂದು ಹಿಂದೆ ಹೇಳಿದ್ದು. ಈಗ ಅಜ್ಞಾನ ವೃತ್ತಿ ರೂಪ ಮೋಕ್ಷ ಎಂಬ ಧರ್ಮಿ ಇದ್ದರೂ ಸಹ ಸದಸದ್ವಿಲಕ್ಷಣವಿಲಕ್ಷಣತ್ವವೆಂಬ ಧರ್ಮವು ಅತ್ಯಂತ ಅಪ್ರಾಮಾಣಿಕವಾಗಿರುವುದರಿಂದ ಐದನೇ ಧರ್ಮವನ್ನು ಮೋಕ್ಷಕ್ಕೆ ಹೇಳಲು ಬರುವುದಿಲ್ಲ ಎಂದು ಹೇಳಿದ್ದಾರೆ ಶ್ರೀಮದಾಚಾರ್ಯರು.

**ಅವತಾರಿಕಾ**=ಅಜ್ಞಾನವೇ ಇಲ್ಲವಾದ್ದರಿಂದ ಅಜ್ಞಾನೀ ಎಂಬ ಅಧಿಕಾರಿಯು ಇಲ್ಲ ಎಂದು ಹೇಳಿದ್ದಾರೆ, ಅಜ್ಞಾನ ಇಲ್ಲದಿರುವುದಕ್ಕೂ ಅಧಿಕಾರಿಯು ಇಲ್ಲದಿರುವುದಕ್ಕೂ ಏನು ಸಂಬಂಧ ಎಂಬ ಶಂಕೆ ಬಂದರೆ ಶ್ರೀಮದಾಚಾರ್ಯರು "ವಿಷಯಪ್ರಯೋಜನಾಭಾವಾದೇವಾಧಿಕಾರೀ ಚ " ಎಂಬ ಗ್ರಂಥದಿಂದ ವಿವರಿಸುತ್ತಾರೆ ಎಂದು ಅವತಾರಿಕಾ ಕೊಡುತ್ತಾರೆ ಶ್ರೀಮಟ್ಟೀಕಾಕೃತ್ಪಾದರು ಮುಂದಿನ ಗ್ರಂಥದಿಂದ—

**ಟೀಕಾ :—** ಅಜ್ಞಾನಾಸಂಭವಾದಧಿಕಾರೀ ಚ ನಿರಸ್ತ ಇತ್ಯುಕ್ತಮ್ । ತದ್ವಿವರಣಾರ್ಥಮಾಹ—

**ಪ್ರತಿಪದಾರ್ಥ** :- ಅಜ್ಞಾನಾಸಂಭವಾತ್ = ಅಜ್ಞಾನವು ಕೂಡುವುದಿಲ್ಲವಾದ್ದರಿಂದ, ಅಧಿಕಾರೀ ಚ = (ಶಾಸ್ತ್ರಕ್ಕೆ ಅಜ್ಞಾನಿ ಎಂಬ) ಅಧಿಕಾರಿಯೂ ನಿರಸ್ತಃ = ನಿರಾಕರಿಸಲ್ಪಟ್ಟಿದ್ದಾನೆ, ಇತ್ಯುಕ್ತಮ್ = ಇಂತೆಂದು ಹೇಳಿದ್ದಷ್ಟೇ ತದ್ವಿವರಣಾರ್ಥಮ್ = ಅದರ ವ್ಯಾಖ್ಯಾನಕ್ಕೋಸ್ಕರವಾಗಿ, ಆಹ = ಹೇಳುತ್ತಿದ್ದಾರೆ. (ಶ್ರೀಮದಾಚಾರ್ಯರು ಮುಂದಿನ ಮೂಲದಿಂದ)

[ **ಮೂಲ** :- " ವಿಷಯಪ್ರಯೋಜನಾಭಾವಾದೇವಾಧಿಕಾರೀ ಚ " ]

**ಪ್ರತಿಪದಾರ್ಥ** :- ವಿಷಯಪ್ರಯೋಜನಾಭಾವಾದೇವ = ಈ ಮೇಲೆ ವಿವರಿಸಿದಂತೆ ವಿಷಯ ಮತ್ತು ಪ್ರಯೋಜನಗಳಿಲ್ಲವಾದ್ದರಿಂದಲೇ, ಅಧಿಕಾರೀ ಚ = ಅಧಿಕಾರಿಯೂ ಕೂಡ (ನಿರಾಕರಣ ಮಾಡಲ್ಪಟ್ಟನು)

{ **ಟೀಕಾ**:- ನಿರಸ್ತ ಇತಿ ಸಂಬಂಧಃ । ಯೋಹಿ ಯತ್ಪ್ರಯೋಜನಮರ್ಥಯಮಾನೋ ಯಂ ವಿಷಯಂ ಜಿಜ್ಞಾಸತೇ ಸ ಏವ ತತ್ರಾಧಿಕಾರೀ ಭವತಿ । ಪ್ರಕೃತೇ ಚ ಅಜ್ಞಾನಾಸಂಭವೇನ ವಿಷಯಪ್ರಯೋಜನೇ ನಿರಾಕೃತೇ ಇತಿ ತದಭಾವಾದೇವ ತದವಿನಾಭೂತೋಧಿಕಾರೀ ಚ ನಿರಸ್ತೋ ವೇದಿತವ್ಯಃ । }

**ಪ್ರತಿಪದಾರ್ಥ** :- ನಿರಸ್ತ ಇತಿ = ಹಿಂದೆ ಬಂದ ವಾಕ್ಯದಲ್ಲಿರುವ ನಿರಸ್ತಃ ಎಂಬ ಶಬ್ದದಿಂದ ಸಂಬಂಧವು ಇರುತ್ತದೆ ಯೋ ಹಿ = ಯಾವ ಪುರುಷನು, ಯತ್ ಪ್ರಯೋಜನಂ = ಯಾವ ಪ್ರಯೋಜನವನ್ನು, ಅರ್ಥಯಮಾನಃ (ಸನ್) ಅಪೇಕ್ಷೆಯುಳ್ಳವನಾಗಿ, ಯಂ ವಿಷಯಂ = (ಅದಕ್ಕೆ ಅನುಕೂಲವಾದ) ಯಾವ ವಿಷಯವನ್ನು, ಜಿಜ್ಞಾಸತೇ = ತಿಳಿಯಲು ಅಪೇಕ್ಷಿಸುತ್ತಾನೋ, ಸ ಏವ = ಆ ಪುರುಷನೇ, ತತ್ರ ಅಂತಹ ಶಾಸ್ತ್ರದಲ್ಲಿ ಅಧಿಕಾರೀ = ಅಧಿಕಾರವುಳ್ಳವನು, ಭವತಿ = ಆಗುತ್ತಾನೆ । ಪ್ರಕೃತೇ ಚ = ಪ್ರಕೃತ ವಿಷಯದಲ್ಲಿ, ಅಜ್ಞಾನಾಸಂಭವೇನ = ಅಜ್ಞಾನವೇ ನಿನ್ನ ಮತದಲ್ಲಿ ಕೂಡುವುದಿಲ್ಲವಾದ್ದರಿಂದ, ವಿಷಯ ಪ್ರಯೋಜನೇ = ಅಜ್ಞಾನ ಸಂಬಂಧಿಯಾದ ವಿಷಯ ಪ್ರಯೋಜನಗಳು, ನಿರಾಕೃತೇ= ನಿರಾಕರಿಸಲ್ಪಟ್ಟವು, ಇತಿ= ಇಂತೆಂದು, ತದಭಾವಾದೇವ= ಆ ವಿಷಯ ಪ್ರಯೋಜನಾದಿಗಳು ಇಲ್ಲವಾದ್ದರಿಂದ, ತದವಿನಾಭೂತಃ = ವಿಷಯ ಪ್ರಯೋಜನಾದಿಗಳನ್ನು ಬಿಟ್ಟು ಇರಲು ಅಶಕ್ತನಾದ, (ಅಂದರೆ ಅವುಗಳನ್ನು ಕೂಡಿಕೊಂಡೇ ಇರುವ) ಅಧಿಕಾರೀ ಚ = ಅಧಿಕಾರಿಯೂ ಕೂಡ, ನಿರಸ್ತಃ = ನಿರಾಕರಣ ಮಾಡಲ್ಪಟ್ಟನು, ಇತಿ =ಇಂತೆಂದು, ವೇದಿತವ್ಯಃ = ತಿಳಿಯತಕ್ಕದ್ದು.

**ಭಾವಾರ್ಥ** :- ನಿನ್ನ ಮತದಲ್ಲಿ ಅಜ್ಞಾನವೇ ಅಯುಕ್ತವಾದ್ದರಿಂದ ನಿನ್ನ ಶಾಸ್ತ್ರಕ್ಕೆ ಅಧಿಕಾರಿಯು ಇಲ್ಲ ಎಂದು " ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಸ್ತಮ್ " ಎಂಬಲ್ಲಿ ಹೇಳಿದ್ದನ್ನೇ ಈಗ ಉಪಪಾದನ ಮಾಡುತ್ತಿದ್ದಾರೆ ಶ್ರೀಮದಾಚಾರ್ಯರು " ವಿಷಯ ಪ್ರಯೋಜನಾಭಾವಾದೇವಾಧಿಕಾರೀ ಚ " ಎಂಬ ಗ್ರಂಥದಿಂದ, ಶ್ರೀಮದಾಚಾರ್ಯರ ಈ ವಾಕ್ಯಕ್ಕೆ " ಅಜ್ಞಾನಾಸಂಭವೇನ ಚತುರ್ಥಪ್ರಕಾರಾಭಾವಾತ್ಪಂಚಮಪ್ರಕರತಾಪಿ ನಿರಸ್ತಾ ಎಂಬ ವಾಕ್ಯದಲ್ಲಿ ಬಂದಂತಹ " ನಿರಸ್ತಾ " ಎಂಬ ಶಬ್ದದಿಂದ ಸಂಬಂಧವನ್ನು ತಿಳಿದುಕೊಳ್ಳಬೇಕು. ಆಗ ಶ್ರೀಮದಾಚಾರ್ಯರ ವಾಕ್ಯವು " ವಿಷಯ ಪ್ರಯೋಜನಾಭಾವಾದೇಧಿಕಾರೀ ಚ ನಿರಸ್ತಃ " ಎಂದತಾಯಿತು.

ಶ್ರೀಮದಾಚಾರ್ಯರ ಈ ಅಭಿಪ್ರಾಯವನ್ನು ಶ್ರೀಮಟ್ಟೀಕಾಕೃತ್ಪಾದಕರು ವಿವರಿಸುತ್ತಿದ್ದಾರೆ. "ಯೋ ಹಿ"

ಎಂಬ ಗ್ರಂಥದಿಂದ, ಅದು ಹೇಗೆಂದರೆ ಯಾವ ಪುರುಷನು ಯಾವ ಪ್ರಯೋಜನವನ್ನು ಹೊಂದಲು ಇಚ್ಛಿಸಂತ್ತಾನೋ ಆ ಪ್ರಯೋಜನಕ್ಕೆ ಕಾರಣವಾದ ವಿಷಯವನ್ನು ತಿಳಿಯಲಿಚ್ಛಿಸುತ್ತಾನೋ ಅವನೇ ಆ ಶಾಸ್ತ್ರಕ್ಕೆ ಅಧಿಕಾರಿಯೂ ಆಗುತ್ತಾನೆ.

ಪ್ರಕೃತದಲ್ಲಿ ನಿನ್ನ ಮತರೀತ್ಯ ಅಜ್ಞಾನವೇ ಕೂಡುವುದಿಲ್ಲವಾದ್ದರಿಂದ ಅಜ್ಞಾನ ವಿಷಯಂ (ಅಜ್ಞಾತ) ಎಂಬ ವಿಷಯಂವಿಲ್ಲ. ಅಜ್ಞಾನನಿವೃತ್ತಿ ಎಂಬ ಪ್ರಯೋಜನವಿಲ್ಲ. ಹೀಗೆ ವಿಷಯ ಪ್ರಯೋಜನಗಳಂ ಇಲ್ಲವಾದ್ದರಿಂದ ಆ ವಿಷಯು ಪ್ರಯೋಜನಗಳಿಂದ ಅತ್ಯಂತ ಸಂಬಂಧವಿರುವ ಅಧಿಕಾರಿಯೂ ಸಹ ಇಲ್ಲದಂತಾಯಿತು.

[ **ಟೀಕಾ** :– ಅಜ್ಞಾನಾಸಂಭವಾತ್ಸಂಬಂಧಾಭಾವ ಉಕ್ತಃ । ತಮುಪಪಾದಯತಿ – ]

**ಪ್ರತಿಪದಾರ್ಥ** :– ಅಜ್ಞಾನಾಸಂಭವಾತ್ = (ಮಾಯಾವಾದಿಯ ಮತದಲ್ಲಿ) ಅಜ್ಞಾನವೇ ಕೂಡುವುದಿಲ್ಲವಾದ್ದರಿಂದ, ಸಂಬಂಧಾಭಾವಃ = ಸಂಬಂಧವು ಇಲ್ಲ ಎಂದು, ಉಕ್ತಃ = ಹೇಳಲ್ಪಟ್ಟಿರುತ್ತದೆ. ತಮ್ = ಆ ಸಂಬಂಧಾಭಾವವನ್ನು ಉಪಪಾದಯತಿ = ಯುಕ್ತಿ ಪೂರ್ವಕ ಹೇಳುತ್ತಿದ್ದಾರೆ ಶ್ರೀಮದಾಚಾರ್ಯರು-

[ **ಮೂಲ** :– " ತದಭಾವಾದೇವ ಸಂಬಂಧೋಽಪಿ " ]

**ಪ್ರತಿಪದಾರ್ಥ** :– ತದಭಾವಾದೇವ = ವಿಷಯಪ್ರಯೋಜನಾಧಿಕಾರಿಗಳು ಇಲ್ಲವಾದ್ದರಿಂದಲೇ. ಸಂಬಂಧೋಽಪಿ = ಸಂಬಂಧವೂ ಕೂಡ, (ನಿರಸ್ತಃ = ನಿರಾಕರಿಸಲ್ಪಟ್ಟಿತು.)

{ **ಟೀಕಾ** : ಸತಾಮೇವ ಹಿ ಸಂಬಂಧೋಭವತಿ । ಅಜ್ಞಾನಾಸಂಭವೇನ ವಿಷಯಾದ್ಯಭಾವಶ್ಚೋಪಪಾದಿತಃ ।
ಅತೋ ವಿಷಯಾದ್ಯಭಾವಾತ್ಸಂಬಂಧೋಽಪಿ ನಿರಸ್ತ ಏವೇತಿ । }

**ಪ್ರತಿಪದಾರ್ಥ** :– ಸತಾಮೇವ ಹಿ = ಸತ್ಯವಾದ ಪದಾರ್ಥಗಳಿಗೇನೇ, ಸಂಬಂಧಃ = ಸಂಬಂಧವು, ಭವತಿ = ಇರುತ್ತದೆ. ಅಜ್ಞಾನಾಸಂಭವೇನ = (ಮಾಯಾವಾದಿಯ ಮತದ ಪ್ರಕಾರ) ಅಜ್ಞಾನವು ಕೂಡುವುದಿಲ್ಲವಾದ್ದರಿಂದ, ವಿಷಯಾದ್ಯಭಾವಶ್ಚ = ವಿಷಯ ಪ್ರಯೋಜನಾಧಿಕಾರಿಗಳ ಅಭಾವವೂ, ಉಪಪಾದಿತಃ = ಯುಕ್ತಿಪೂರ್ವಕವಾಗಿ ಸಮರ್ಥಿಸಲ್ಪಟ್ಟಿದೆ. ಅತಃ = ಆದ್ದರಿಂದ. ವಿಷಯಾದ್ಯಭಾವಾತ್ = ವಿಷಯ ಪ್ರಯೋಜನ ಅಧಿಕಾರಿಗಳಂ ಇಲ್ಲವಾದ್ದರಿಂದ, ಸಂಬಂಧೋಽಪಿ = ಸಂಬಂಧವೂ ಕೂಡ ನಿರಸ್ತಃ ಏವ= ನಿರಾಕೃತವೇ ಆಯಿತು, ಇತಿ = ಇಂತೆಂದು (ಆಚಾರ್ಯರ ಅಭಿಪ್ರಾಯವು).

**ಭಾವಾರ್ಥ** :– ಅಜ್ಞಾನ ಎಂಬ ಪದಾರ್ಥವು ಮಾಯಾವಾದಿಯ ಮತದಲ್ಲಿ ಯುಕ್ತವಾಗಿಲ್ಲವಾದ್ದರಿಂದ ಮಾಯಾವಾದಿ ಮತ ರೀತ್ಯಾ ಅಜ್ಞಾತ ಎಂಬ ವಿಷಯವು, ಅಜ್ಞಾನಿ ಎಂಬ ಅಧಿಕಾರಿಯು, ಅಜ್ಞಾನನಿವೃತ್ತಿ ಎಂಬ ಪ್ರಯೋಜನವು ಇಲ್ಲ ಎಂದು ಈಗಾಗಲೇ ಸಮರ್ಥಿಸಿದೆ. ಒಂದು ವೇಳೆ ಇವು ಯುಕ್ತವಾಗಿದ್ದರೆ ಇವುಗಳಿಗೆ ಸಂಬಂಧವನ್ನು ಹೇಳಬಹುದಿತ್ತು. ಏಕೆಂದರೆ ಸತ್ಯವಾದಂತಹ ಭೂತಲ ಘಟಗಳಿಗೆ ಸಂಬಂಧವನ್ನು ಹೇಳಿರುವುದು ಕಂಡಿದೆ. ಅಸತ್ಯವಾದಂತಹ ಶಶವಿಷಾಣ, ನರವಿಷಾಣಗಳಿಗೆ ಸಂಬಂಧವನ್ನು ಹೇಳಲು ಬರುವುದಿಲ್ಲ. ಅದರಂತೆಯೇ

ಅಸತ್ಯವಾದಂತಹ ವಿಷಯಂ ಪ್ರಯೋಜನ ಅಧಿಕಾರಿಗಳಿಗೆ ಸಂಬಂಧವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಸಂಬಂಧ ಎಂಬ ನಾಲ್ಕನೆಯ ಅನುಬಂಧವೂ ಕೂಡ ನಿರಾಕೃತವಾಯಿತು.

{ **ಟೀಕಾ** :- ಏವಂ ವೇದಾದೇರ್ಜೀವಬ್ರಹ್ಮಣೋರೇಕತ್ವಪ್ರತಿಪಾದಕತ್ವೇ ಅನಾರಂಭಣೀಯತ್ವಪ್ರಸಂಗಾನ್ನ ತತ್ಪ್ರತಿಪಾದಕತ್ವಮಿತ್ಯುಕ್ತಮ್ । }

**ಪ್ರತಿಪದಾರ್ಥ** :- ಏವಂ = ಈ ರೀತಿಯಾಗಿ, ವೇದಾದೇಃ = ವೇದಾದಿಗಳಿಗೆ, ಜೀವಬ್ರಹ್ಮಣೋಃ = ಜೀವ ಬ್ರಹ್ಮರಿಗೆ, ಐಕ್ಯಪ್ರತಿಪಾದಕತ್ವೇ = ಐಕ್ಯಪ್ರತಿಪಾದಕತ್ವವು ಇದ್ದರೆ, ಅನಾರಂಭಣೀಯತ್ವ ಪ್ರಸಂಗಾತ್ = ಅನಾ ರಂಭಣೀಯತ್ವದ ಪ್ರಸಂಗವು ಬರುವುದರಿಂದ, ತತ್ಪ್ರತಿಪಾದಕತ್ವಂ ನ = ಐಕ್ಯಪ್ರತಿಪಾದಕತ್ವವು ಇಲ್ಲ. ಇತಿ = ಇಂತೆಂದಂ, ಉಕ್ತಮ್ = ಹೇಳಲ್ಪಟ್ಟರಂತ್ತದೆ.

**ಭಾವಾರ್ಥ** :- ಈ ರೀತಿಯಾಗಿ ವೇದಾದಿಗಳು ವೇದ ಬ್ರಹ್ಮರ ಐಕ್ಯವನ್ನು ಹೇಳುತ್ತವೆ ಎಂದು ಅಂಗೀ ಕರಿಸಿದರೆ ಆ ವೇದಾದಿಗಳಿಗೆ ಅನಾರಂಭಣೀಯತ್ವವನ್ನು (ಅಂದರೆ ಜ್ಞಾನಿಗಳಿಂದ ಸ್ವೀಕಾರಯೋಗ್ಯವಲ್ಲ ಎನ್ನುವುದನ್ನು) ಹೇಳಬೇಕಾಗುತ್ತದೆ. ಇದನ್ನ ಪರಿಹರಿಸಲು ವೇದಾದಿಗಳು ಹೇಳುವುದಿಲ್ಲ ಅಂದರ ವೇದಾದಿಗಳಿಗೆ ಐಕ್ಯದಲ್ಲಿ ತಾತ್ಪರ್ಯವಿಲ್ಲ ಎಂದು ಅಂಗೀಕರಿಸಲೇಬೇಕು ಎಂದು ಸಮರ್ಥಿಸಿದೆ.

{ **ಟೀಕಾ** :- ಇದಾನೀಂ ಪರಮಾಪ್ತತಮೇನ ಭಗವತಾ ಶ್ರುತ್ಯಾ ಚ ವಿಷ್ಣೋಃ ಸರ್ವೋತ್ತಮತ್ವಸ್ಯೈವ ಸರ್ವಶಾಸ್ತ್ರಪ್ರತಿಪಾದ್ಯತಯಾ ಅಭಿಹಿತತ್ವಾಚ್ಚ ತದೇವ ವೇದಾದಿ ಪ್ರತಿಪಾದ್ಯಂ ನಾತ್ಮಬ್ರಹ್ಮೈಕ್ಯಮಿತ್ಯಾಹ }

**ಪ್ರತಿಪದಾರ್ಥ** : ಇದಾನೀಂ ಈಗ (ಮುಂದಿನ ಗ್ರಂಥದಿಂದ), ಪರಮಾಪ್ತತಮೇನ = ಅತ್ಯಂತ ಆಪ್ತ ನಾದಂತಹ, ಭಗವತಾ = ಶ್ರೀಹರಿಯಿಂದ, ಚ = ಮತ್ತು ಶ್ರುತ್ಯಾ = ಶ್ರುತಿಯಿಂದ, ವಿಷ್ಣೋಃ = ಶ್ರೀಹರಿಯ, ಸರ್ವೋತ್ತಮತ್ವಸ್ಯೈವ = ಸರ್ವೋತ್ತಮತ್ವಕ್ಕೇನೆ, ಸರ್ವಶಾಸ್ತ್ರಪ್ರತಿಪಾದ್ಯತಯಾ = ಸಮಸ್ತಶಾಸ್ತ್ರ ಪ್ರತಿಪಾದ್ಯತ್ವ ಎಂಬ ಧರ್ಮದಿಂದ, ಅಭಿಹಿತತ್ವಾಚ್ಚ = ಹೇಳಲ್ಪಟ್ಟಿದ್ದರಿಂದ, ತದೇವ = ಆ ವಿಷ್ಣುಸರ್ವೋತ್ತಮತ್ವವೇ, ವೇದಾದಿ ಪ್ರತಿಪಾದ್ಯಂ = ವೇದವೇ ಮೊದಲಾದ ಶಾಸ್ತ್ರದಿಂದ ಹೇಳಲ್ಪಡುತ್ತದೆ. ಆತ್ಮಬ್ರಹ್ಮೈಕ್ಯಂ = ಜೀವಬ್ರಹ್ಮೈಕ್ಯವು ನ ಪ್ರತಿಪಾದ್ಯಂ = ಹೇಳಲ್ಪಡುವುದಿಲ್ಲ, ಇತಿ = ಇಂತೆಂದು, ಆಹ = (ಶ್ರೀಮದಾಚಾರ್ಯರು) ಹೇಳಿದರು- " ದ್ವಾವಿಮೌ " ಎಂಬ ಮುಂದಿನ ಗ್ರಂಥದಿಂದ.

**ಭಾವಾರ್ಥ** :- ಈಗ ಪರಮ ಶ್ರೇಷ್ಠ ಆಪ್ತನಾದ ಭಗವಂತನಾದ ಶ್ರೀ ಕೃಷ್ಣ ಮತ್ತು ಶ್ರುತಿಗಳು ಶ್ರೀ ವಿಷ್ಣು ಸರ್ವೋತ್ತಮತ್ವವೇ ಸರ್ವಶಾಸ್ತ್ರದಿಂದ ಪ್ರತಿಪಾದ್ಯವು ಎಂದು ಸಮರ್ಥಿಸಿದ್ದಾರೆ. ಆದ್ದರಿಂದ ಶ್ರೀ ವಿಷ್ಣು ಸರ್ವೋತ್ತಮತ್ವವೇ ಸರ್ವ ಶಾಸ್ತ್ರಪ್ರತಿಪಾದ್ಯವೇ ವಿನಹ ಜೀವಬ್ರಹ್ಮೈಕ್ಯವಲ್ಲ ಎಂದು ಇನ್ನು ಸಮರ್ಥಿಸುತ್ತಾರೆ.

[ **ಮೂಲ** :- " ದ್ವಾವಿಮೌ ಪುರುಷೌ ಲೋಕೇಕ್ಷರಶ್ಚಾಕ್ಷರ ಏವ ಚ । ]

**ಪ್ರತಿಪದಾರ್ಥ :-** ಲೋಕೇ = ಈ ಪ್ರಮಾಣ ಪ್ರಸಿದ್ಧವಾದ ಜಗತ್ತಿನಲ್ಲಿ, ಇಮೌ ಪುರುಷೌ = ಚೇತನರು, ಕ್ಷರಃ = ಕ್ಷರ ಎಂದು, ಚ = ಮತ್ತು, ಅಕ್ಷರಃ = ಅಕ್ಷರ ಎಂದು, ದ್ವೌ ಏವ = ಎರಡೇ ವಿಭಾಗವುಳ್ಳವರು ಆಗಿದ್ದಾರೆ.

**ಭಾವಾರ್ಥ :-** ಈ ಪ್ರಮಾಣ ಪ್ರಸಿದ್ಧವಾದ ಜಗತ್ತಿನಲ್ಲಿ ಕ್ಷರಪುರುಷರು, ಅಕ್ಷರಪುರುಷರು ಎಂದು ಚೇತನರಲ್ಲಿ ಎರಡೇ ಭಾಗಗಳಿವೆ.

{ **ಟೀಕಾ :-** ಇಮೌ ಇತಿ ಪ್ರಮಾಣಸಿದ್ಧತಾಂ ಸೂಚಯಂತಿ । ಪುರುಷೌ ಚೇತನೌ । ಏವ ಶಬ್ದಸ್ಯ ದ್ವಾವೇವ ಇತಿ ಸಂಬಂಧಃ । ತದ್ಘಟನಾಯ ಪರಮ ಪುರುಷಂ ವ್ಯಾವರ್ತಯಿತುಂ ಲೋಕೇ ಇತ್ಯುಕ್ತಂ । }

**ಪ್ರತಿಪದಾರ್ಥ :-** ಇಮೌ ಇತಿ = ಇಲ್ಲಿ ' ಇಮೌ ' ಎಂಬ ಶಬ್ದದಿಂದ ಈ ವಿಭಾಗಕ್ಕೆ, ಪ್ರಮಾಣ ಸಿದ್ಧತಾಂ= ಪ್ರಮಾಣ ಪ್ರಸಿದ್ಧಿಯನ್ನು, ಸೂಚಯಂತಿ = ಸೂಚಿಸಿದ್ದಾರೆ, ಪುರುಷೌ = (ಪುರುಷ ಶಬ್ದಕ್ಕೆ, ಯದ್ಯಪಿ ಗಂಡಸು ಎಂದು ರೂಡಿಯಲ್ಲಿರುತ್ತದೆ, ಹಾಗೆ ಮಾತ್ರ ಅಲ್ಲ) ಪುರುಷ ಶಬ್ದಕ್ಕೆ, ಚೇತನೌ = ಚೇತನ ಎಂದು ಅರ್ಥ ಎಂಬುದನ್ನು ' ಪುರುಷೌ ' ಎಂಬ ಗ್ರಂಥದಿಂದ ಹೇಳುತ್ತಿದ್ದಾರೆ. ಏವ ಶಬ್ದಸ್ಯ = ಏವ ಎಂಬ ಶಬ್ದಕ್ಕೆ ದ್ವಾವೇತಿ ಸಂಬಂಧಃ = ದ್ವೌ ಎಂಬ ಶಬ್ದದಿಂದ ಅನ್ವಯ ಮಾಡಿಕೊಳ್ಳಬೇಕು. ತದ್ಘಟನಾಯ ತತ್ = ಜೀವ ರಲ್ಲಿ ಕ್ಷರ ಮತ್ತು ಅಕ್ಷರ ಎಂದು ಎರಡೇ ಭಾಗ ಇರುವುದು ಎಂಬುದನ್ನು, ಘಟನಾಯ = ಯುಕ್ತವನ್ನಾಗಿ ಮಾಡಿಕೊಳ್ಳುವುದಕ್ಕೋಸ್ಕರ, ಪರಮ ಪುರುಷಂ=ಪುರುಷ ವಿಲಕ್ಷಣನಾದ ಪರಮಾತ್ಮನನ್ನು, ವ್ಯಾವರ್ತಯಿತುಂ= ಈ ಮೇಲೆ ಹೇಳಿದ ಚೇತನರಿಂದ ಹೊರತುಪಡಿಸಲು, ಲೋಕೇ = ಈ ಲೋಕದಲ್ಲಿ, ಇತ್ಯುಕ್ತಮ್ = ಈ ರೀತಿ ಹೇಳಲ್ಪಟ್ಟಿರುತ್ತದೆ.

**ಪ್ರತಿಪದಾರ್ಥ :-** ಮೂಲದಲ್ಲಿ " ಇಮೌ " ಎಂಬ ಶಬ್ದವು ಈ ವಿಭಾಗವು ಪ್ರಮಾಣಪ್ರಸಿದ್ಧ ಎಂದು ತಿಳಿಸುತ್ತದೆ. ಲೋಕದಲ್ಲಿ ಪುರುಷ ಎಂಬ ಶಬ್ದವು " ಗಂಡಸು " ಎಂಬ ಅರ್ಥದಲ್ಲಿ ಪ್ರಸಿದ್ಧವಾಗಿದ್ದರೂ ಸಹ ಪ್ರಕೃತದಲ್ಲಿ ಈ ಪುರುಷ ಶಬ್ದಕ್ಕೆ " ಚೇತನ " ಎಂದು ಅರ್ಥ. " ಏವ " ಕಾರವನ್ನು " ದ್ವೌ " ಎಂಬ ಶಬ್ದದಿಂದ ಅನ್ವಯ ಮಾಡಬೇಕು. ಆಗ " ದ್ವಾವೇವ " ಎಂದು ಆಗುತ್ತದೆ. ಈ ಲೋಕದಲ್ಲಿ ಈ ಎರಡೇ ಭಾಗಗಳಿವೆ. ಮೂರನೇಯದು ಇಲ್ಲ ಎನ್ನುವುದನ್ನು ಯುಕ್ತವನ್ನಾಗಿ ಪ್ರತಿಪಾದಿಸಲು " ಲೋಕೇ " ಎಂದು ಪ್ರಯೋಗಿಸಿದೆ. ಇದರಿಂದ ಶ್ರೀ ಹರಿಯು ಇವೆರಡರಿಂದ ವಿಲಕ್ಷಣನು ಎಂದು ಪ್ರತಿಪಾದಿಸಿದಂತಾಯಿತು.

[ ಮೂಲ :- " ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ " ]

**ಪ್ರತಿಪದಾರ್ಥ :-** ಸರ್ವಾಣಿ ಭೂತಾನಿ = ಸಮಸ್ತ ಜೀವರು, ಕ್ಷರಃ = ನಾಶವುಳ್ಳ ಚೇತನರು, ಕೂಟಸ್ಥಾ= ಅವ್ಯಕ್ತ ಆಕಾಶದಂತೆ ನಾಶರಹಿತಳಾದಂತಹ ಲಕ್ಷ್ಮೀದೇವಿಯು ಅಕ್ಷರಃ = ಅಕ್ಷರ ಚೇತನಳು ಎಂದು, ಉಚ್ಯತೇ = ಹೇಳಲ್ಪಡುತ್ತಾಳೆ.

**ಭಾವಾರ್ಥ :-** ಕ್ಷರ ಮತ್ತು ಅಕ್ಷರ ಚೇತನರು ಯಾರು ಎನ್ನುವುದನ್ನು ವಿವರಿಸುತ್ತಿದ್ದಾರೆ=ಸಮಸ್ತ ಜೀವರು ಕ್ಷರಪುರುಷರು, ಲಕ್ಷ್ಮೀದೇವಿಯು ನಾಶರಹಿತಳಾದ್ದರಿಂದ ಅಕ್ಷರ ಪುರುಷಳು ಎಂದು.

ಈ ಮೇಲಿನ ಶ್ಲೋಕದಿಂದ ಏನು ಹೇಳಿದಂತಾಯಿತು ಎನ್ನುವುದನ್ನು ವಿವರಿಸುತ್ತಿದ್ದಾರೆ– ಮುಂದಿನ **ಟೀಕಾದಿಂದ—**

{ **ಟೀಕಾ :-** ತದನೇನೋತ್ತಮಪುರುಷನಿರೂಪಣಸ್ಯ ಅಪೇಕ್ಷಿತಂ ಪುರುಷನಿರೂಪಣಂ ಕೃತಮ್ ತತಃ ಕಿಮಿತ್ಯತ ಆಹ । }

**ಪ್ರತಿಪದಾರ್ಥ :-** ತತ್ = ಆ ಕಾರಣ ದೆಸೆಯಿಂದ, ಅನೇನ = ಕ್ಷರಃಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೇ ಎಂಬ ಗ್ರಂಥದಿಂದ, ಉತ್ತಮಪುರುಷನಿರೂಪಣಸ್ಯ = ಉತ್ತಮ ಪುರುಷನನ್ನು ತಿಳಿಸಿಕೊಡುವುದಕ್ಕೆ, ಅಪೇಕ್ಷಿತಂ = ಅವಶ್ಯವಾಗಿ ಅಪೇಕ್ಷಿತವಾದಂತಹ, ಪುರುಷನಿರೂಪಣಂ = ಅಧಮರಾಗಿರತಕ್ಕಂತಹ ಚೇತನರ ನಿರೂಪಣವು, ಕೃತಮ್ = ಮಾಡಲ್ಪಟ್ಟಿತು,

ತತಃ = ಈ ಜೀವರಲ್ಲಿ ಎರಡು ವಿಭಾಗವಿದೆ ಎಂದು ಹೇಳುವುದರಿಂದ, ಕಿಮ್ = ಪ್ರಕೃತಕ್ಕೆ ಏನು ಪ್ರಯೋಜನ, ಇತ್ಯತಃ=ಇಂತೆಂಬ ಪ್ರಶ್ನೆ ಬಂದರೆ, ಆಹ=ಹೇಳುತ್ತಾರೆ.

**ಭಾವಾರ್ಥ :-** ಒಬ್ಬನನ್ನು ಉತ್ತಮ ಎಂದು ಹೇಳಿದರೆ ಅವನು ಯಾರ ದೆಸೆಯಿಂದ ಉತ್ತಮ ಎಂಬ ಪ್ರಶ್ನೆ ಬರುತ್ತದೆ. ಆದ್ದರಿಂದ ಉತ್ತಮತ್ವವನ್ನು ತಿಳಿಸಬೇಕಾದರೆ ಅಧಮನ್ನು ಮೊದಲು ತಿಳಿಸಬೇಕು. ಅದಕ್ಕಾಗಿ ಶ್ರೀ ಕೃಷ್ಣನು ತನ್ನ ಪುರುಷೋತ್ತಮತ್ವವನ್ನು ಹೇಳಲು ಅವಶ್ಯವಾಗಿ ಬೇಕಾದಂತಹ ಜೀವರ ಅಧಮತ್ವವನ್ನು ಹೇಳಿದ್ದಾನೆ. ಹೀಗೆ ಚೇತನರಲ್ಲಿ ದ್ವೈವಿಧ್ಯವನ್ನು ಹೇಳುವುದರಿಂದ ಏನು ಲಾಭವೆಂಬ ಪ್ರಶ್ನೆಗೆ ಉತ್ತರವನ್ನು ಕೊಡುತ್ತಾರೆ ಶ್ರೀಮದಾಚಾರ್ಯರು ಮುಂದಿನ ಗ್ರಂಥದಿಂದ—

[ **ಮೂಲ :-** " ಉತ್ತಮಃ ಪುರುಷಸ್ತ್ವನ್ಯಃ " ]

**ಪ್ರತಿಪದಾರ್ಥ :-** ಉತ್ತಮಃ = ಉತ್ತಮನಾಗಿರತಕ್ಕಂತಹ, ಪುರುಷಸ್ತು = ಚೇತನನು ಮಾತ್ರ, ಅನ್ಯಸ್ತು = ಬೇರೆಯೇ ಆಗಿದ್ದಾನೆ.

[ **ಟೀಕಾ :-** ಅನ್ಯಃ ಕ್ಷರಾಕ್ಷರಾಭ್ಯಾಮ್ । ನತ್ವನಯೋರೇವ ಏಕಃ ಪುರುಷೋತ್ತಮಃ ಕಲ್ಪ್ಯತ ಇತಿ ಭಾವಃ । ]

**ಪ್ರತಿಪದಾರ್ಥ :-** ಕ್ಷರಾಕ್ಷರಾಭ್ಯಾಮ್ = ಕ್ಷರಾಕ್ಷರ ಚೇತನರ ದೆಸೆಯಿಂದ, ಅನ್ಯಃ = ಭಿನ್ನನು ಆಗಿರುವನು, ಅನಯೋಃ ಏವ=ಈ ಕ್ಷರಾಕ್ಷರ ಪುರುಷರಲ್ಲಿಯೇ, ಏಕಃ=ಒಬ್ಬನು, ಪುರುಷೋತ್ತಮಃ = ಪುರುಷೋತ್ತಮನು, ನಕಲ್ಪ್ಯತೇ = ಕಲ್ಪಿಸಲ್ಪಡುವುದಿಲ್ಲ, ಇತಿ ಭಾವಃ = ಇಂತೆಂದು ಅಭಿಪ್ರಾಯ.

**ಭಾವಾರ್ಥ :-** ಮೂಲದಲ್ಲಿ ಇರುವ ' ಅನ್ಯಃ ' ಎಂಬ ಶಬ್ದವು ಭೇದವುಳ್ಳವನು ಎಂದು ಅರ್ಥದಲ್ಲಿ ಹೇಳುತ್ತದೆ ಭೇದ ಜ್ಞಾನವು ಪ್ರತಿಯೋಗಿಯ ಜ್ಞಾನವನ್ನು ಅಪೇಕ್ಷಿಸುತ್ತದೆ. ಅದರಿಂದ ಪ್ರತಿಯೋಗಿ ಯಾರು ಎಂದು

ನಿರೂಪಿಸುತ್ತಿದ್ದಾರೆ ಶ್ರೀಮಟ್ಟೀಕಾಕೃತ್ಪಾದರು ಕ್ಷರಾಕ್ಷಾಭ್ಯಾಂ ಅನ್ಯಃ ಎಂಬ ಗ್ರಂಥದಿಂದ ಇಲ್ಲಿ ಪುರುಷೋತ್ತಮ ಎಂಬಲ್ಲಿ ವಿಗ್ರಹವನ್ನು ಹೇಗೆ ಮಾಡಬೇಕು ? ಪುರುಷೇಷು ಉತ್ತಮಃ ಎಂಬೋ ಅಥವಾ ಪುರುಷೇಭ್ಯಃ ಉತ್ತಮಃ ಎಂದೋ ? ಎಂಬ ಪ್ರಶ್ನೆ ಬಂದರೆ ಪುರುಷೇಭ್ಯಃ ಉತ್ತಮಃ ಎಂದೇ ಮಾಡಬೇಕು. ಅಂದರೆ ಪರಮಾತ್ಮನು ಈ ಕ್ಷರಾಕ್ಷರ ಚೇತನರಲ್ಲೆ ಒಬ್ಬವನಾಗಿದ್ದು ಅವರಿಗಿಂತ ಸ್ವಲ್ಪ ವಿಶೇಷವುಳ್ಳವನು ಎಂದು ತಿಳಿಯತಕ್ಕದ್ದಲ್ಲ ಅವರ ದೆಸೆಯಿಂದ ಅತ್ಯಂತ ವಿಲಕ್ಷಣನಾಗಿದ್ದಾನೆ ಎಂದು ತಿಳಿಸಲು "ಅನ್ಯಃ" ಎಂಬ ಶಬ್ದ ಪ್ರಯೋಗವು ಎಂದು ಅಭಿಪ್ರಾಯ,

[ **ಟೀಕಾ** :- ಅನಸ್ಯ ಉತ್ತಮ ಪುರುಷತ್ವೇ ಶುತ್ಯಾದಿಸಮ್ಮತಿಮಾಹ— ]

**ಪ್ರತಿಪದಾರ್ಥ** :- ಅನ್ಯಸ್ಯ=ಕ್ಷರಾಕ್ಷರ **ಪುರುಷರ** ದೆಸೆಯಿಂದ **ಭಿನ್ನನಾದ** ಚೇತನನಿಗೆ, ಉತ್ತಮ ಪುರುಷತ್ವೇ = ಉತ್ತಮ ಪುರುಷತ್ವ ಇರುವ ವಿಷಯದಲ್ಲಿ, ಶ್ರುತ್ಯಾದಿಸಮ್ಮತಿಂ = ಶ್ರುತಿಃ =ವೇದವು, ಆದಿ = ಬ್ರಹ್ಮಸೂತ್ರವೇ ಮೊದಲಾದವುಗಳ, ಸಮ್ಮತಿಂ = ಒಪ್ಪಿಗೆಯನ್ನು ಆಹ = ಹೇಳುತ್ತಿದ್ದಾರೆ—

[ **ಮೂಲ** :- " ...........ಪರಮಾತ್ಮೇತ್ಯುದಾಹೃತಃ "

**ಪ್ರತಿಪದಾರ್ಥ** :- **ಪರಮಾತ್ಮೇತಿ** = (ಆ **ಉತ್ತಮ** ಪುರುಷನು) ಪರಮಾತ್ಮ ಎಂದು ಉದಾಹೃತಃ = (ವೇದದಲ್ಲಿ) **ಹೇಳಲ್ಪಟ್ಟಿರುತ್ತಾನೆ.**

[ **ಟೀಕಾ** :- ಆತ್ಮಶಬ್ದೋತ್ರ ಚೇತನ ಪರ್ಯಾಯಃ ]

**ಪ್ರತಿಪದಾರ್ಥ** :- ಅತ್ರ=ಪರಮಾತ್ಮಾ ಎಂಬಲ್ಲಿರುವ, ಆತ್ಮಶಬ್ದಃ = ಆತ್ಮಶಬ್ದವು, ಚೇತನ ಪರ್ಯಾಯಃ = ಚೇತನ ಎಂಬ ಅರ್ಥದಲ್ಲಿ ಉಂಟು.

**ಭಾವಾರ್ಥ** :- ಈಗ ಪುರುಷರಲ್ಲಿ ಎರಡು ವಿಭಾಗ ಎಂದು ಪೂರ್ವದಲ್ಲಿ ಪ್ರಸಕ್ತವಾಗಿದೆ. ಈ ಪುರುಷ ಶಬ್ದಕ್ಕೆ **ಚೇತನ** ಎಂದು **ಅರ್ಥವನ್ನು** ಹೇಳಿದೆ. ಆದ್ದರಿಂದ ಅವರಿಂದ ವೈಲಕ್ಷಣ್ಯವಂದನ ಉತ್ತಮತ್ವವನ್ನು ಹೇಳುವಾಗ **ಪುರುಷೋತ್ತಮ** ಎಂದು ಹೇಳಿದೆ. ಆದರಿಂದ ಪುರುಷೋತ್ತಮತ್ವವನ್ನು ಹೊಂದಿಸುವಾಗ ಪರಮಪುರುಷ ಎಂಬ ಶಬ್ದ ಸಮಾಖ್ಯಾವನ್ನಾಗಲಿ ಅಥವಾ ಚೇತನ ಎಂದು ಅರ್ಥ ಸಮಾಖ್ಯಾವನ್ನಾಗಲಿ ಪ್ರಯೋಗ ಮಾಡಬೇಕಿತ್ತು. ಆದ್ದರಿಂದ ಪರಮಾತ್ಮ ಎಂದು ಪ್ರಯೋಗಿಸಲ್ಪಟ್ಟ ಶಬ್ದವು ಪರಮಾತ್ಮನಲ್ಲಿ ಪುರುಷೋತ್ತಮತ್ವವನ್ನು ಸಮರ್ಥಿಸಲು ಹೇಗೆ ಸಮಾಖ್ಯಾವಾಗುತ್ತದೆ ಎಂಬ ಪ್ರಶ್ನೆ ಬಂದರ ಅದಕ್ಕೆ ಉತ್ತರವನ್ನು ಹೇಳುತ್ತಿದ್ದಾರೆ ಇಲ್ಲಿ ಪರಮಾತ್ಮಾ ಎಂಬಲ್ಲಿರುವ ಆತ್ಮಶಬ್ದವು ಚೇತನ ಎಂಬ ಅರ್ಥದಲ್ಲಿಯೇ ಇದೆ. ಆದ್ದರಿಂದ ಪರಮಾತ್ಮ ಎಂದರೂ ಪರಮಚೇತನ ಎಂದರೂ ಒಂದೇ ಆಯಿತು. ಹೀಗೆ ಪುರುಷೋತ್ತಮತ್ವ ವಿಷಯದಲ್ಲಿ ಪರಮಾತ್ಮಾ ಎಂಬ ಶಬ್ದವು ಅರ್ಥಸಮಾಖ್ಯಾವಾಯಿತು.

[ **ಟೀಕಾ** :- ಯುಕ್ತಿಂ ಚಾಹ— ]

**ಪ್ರತಿಪದಾರ್ಥ** :– ಯಂಕ್ತಿಂ ಚ = (ಪರಮಾತ್ಮನಿಗೆ ಪುರುಷೋತ್ತಮತ್ವ ವಿಷಯದಲ್ಲಿ) ಯಂಕ್ತಿಯನ್ನು, ಆಹ = (ಶ್ರೀ ಕೃಷ್ಣನು ಭಗವದ್ಗೀತಾದಲ್ಲಿ) ಹೇಳುತ್ತಾನೆ—

[ **ಮೂಲ** :– "ಯೋಲೋಕತ್ರಯಮಾವಿಶ್ಯ ಬಿಭರ್ತಿ............" ]

**ಪ್ರತಿಪದಾರ್ಥ** :– ಯಃ = ಯಾವನು, **ಲೋಕತ್ರಯಂ** = **ಮೂರು** ಲೋಕಗಳನ್ನು ಆವಿಶ್ಯ = ಪ್ರವೇಶಿಸಿ, ಬಿಭರ್ತಿ = ಧಾರಣಮಾಡಿದ್ದಾನೋ (ಅವನು ಪುರುಷೋತ್ತಮನು).

[ **ಟೀಕಾ** :– ಯೋ ಹಿ ಯಂಸ್ಯ ಭರ್ತಾ ಸ ಸತ್ಮಾದುತ್ತಮೋ ಯಂಕ್ತಃ ]

**ಪ್ರತಿಪದಾರ್ಥ** :– ಯಃ = ಯಾವನು, ಯಸ್ಯ=ಯಾವನಿಗೆ, ಭರ್ತಾ – ರಕ್ಷಕನೋ, ಸಃ = ಆ ರಕ್ಷಕನು, ತಸ್ಮಾತ್ = ಆ ರಕ್ಷಿತನಾದ ಪುರುಷನ ದೆಸೆಯಿಂದ, ಉತ್ತಮಃ=ಉತ್ತಮನು ಆಗಿರುತ್ತಾನೆ, (ಎಂದು) ಯಂಕ್ತಃ = ಯಂಕ್ತಿಗೆ ಸಮ್ಮತನಾಗಿದ್ದಾನೆ. ಹಿ=ನಿಶ್ಚಯವು.

**ಭಾವಾರ್ಥ** :– ಯಾರು ಯಾರನ್ನು ರಕ್ಷಿಸುತ್ತಾರೋ ಆ ರಕ್ಷಿತರಾದವರ ದೆಸೆಯಿಂದ ರಕ್ಷಿಸುವವರು ಶ್ರೇಷ್ಠರು ಎನ್ನುವುದು ಲೋಕದಲ್ಲಿ ಸರ್ವಸಮ್ಮತವಾಗಿದೆ.

[ **ಟೀಕಾ** :– ಆವಿಷ್ಟಸ್ಯ ತನ್ನಾಶೇ ನಾಶಪ್ರಸಂಗ ಇತ್ಯತ ಆಹ ]

[ **ಮೂಲ** :– "............ಅವ್ಯಯಃ............" [

**ಪ್ರತಿಪದಾರ್ಥ** :— ಆವಿಷ್ಟಸ್ಯ = (ಮೂರು ಲೋಕಗಳನ್ನು) ಪ್ರವೇಶಿಸಿದವನಿಗೆ, ತನ್ನಾಶೇ = ತತ್ = ಆ ಲೋಕಗಳ ನಾಶವಾಗುವಾಗ, ನಾಶಪ್ರಸಂಗಃ = ನಾಶವಾಗುವ ಪ್ರಸಂಗವು ಬರುತ್ತದೆ, ಇತ್ಯತಃ = ಹೀಗೆ ಶಂಕಾ ಬಂದರೆ ಅದಕ್ಕೆ ಸಮಾಧಾನವನ್ನು ಕೊಡುತ್ತಾರೆ– "ಅವ್ಯಯಃ" ಎಂದು ಅಂದರೆ = ಆ ಪರಮಾತ್ಮನು ನಾಶವಿಲ್ಲದವನು ಎಂದು.

**ಭಾವಾರ್ಥ** :– ಶ್ರೀ ಹರಿಯು ಸಮಸ್ತ ಬ್ರಹ್ಮಾಂಡವನ್ನು ರಕ್ಷಿಸುವುದರಿಂದ ಅವನು ಈ ಬ್ರಹ್ಮಾಂಡದ ದೆಸೆಯಿಂದ ಉತ್ತಮನಾಗಿರುತ್ತಾನೆ ಎಂದು ಹೇಳಿದಂತಾಯಿತು ಇದರಿಂದ "ಪರಮಾತ್ಮ ಸರ್ವೋತ್ತಮಃ ಸರ್ವರಕ್ಷಕತ್ವಾತ್ । ಯಃ ಯದ್ರಕ್ಷತಿ ಸಃ ತಸ್ಮಾದುತ್ತಮಃ । ಯಥಾ ಪಿತೃಪುತ್ರಃ, ರಾಜ ಪ್ರಜಾದಿಕಂ । " ಎಂಬ ಯುಕ್ತಿಯನ್ನು ಹೇಳಿಕೊಟ್ಟಂತಾಯಿತು. ಪರಮಾತ್ಮನು ಹೀಗೆ ಬ್ರಹ್ಮಾಂಡದ ಒಳಗೆ ಇದು ರಕ್ಷಿಸುವದಾದರೆ ಮಹಾಪ್ರಳಯಂ ಕಾಲದಲ್ಲಿ ಬ್ರಹ್ಮಾಂಡವು ನಾಶವಾಗುವಾಗ ಪರಮಾತ್ಮನೂ ನಾಶವಾಗಬೇಕಾಯಿತು. ಏಕೆಂದರೆ ಒಂದು ಪದಾರ್ಥವು ನಾಶವಾದರೆ ಅದರಲ್ಲಿರುವ ಅವಾಂತರ ಪದಾರ್ಥವು ನಾಶವಾಗುವುದು ಕಂಡಿದೆ. ಅದರಂತೆಯೇ ಪ್ರಕೃತದಲ್ಲಿ ಪರಮಾತ್ಮನಿಗೂ ನಾಶವನ್ನು ಹೇಳಬೇಕಾಗುತ್ತಿದೆ ಎಂಬ ಶಂಕಾ ಬಂದರೆ ಉತ್ತರವನ್ನು ಹೇಳುತ್ತಾರೆ "ಅವ್ಯಯಃ" ಎಂಬ ಶಬ್ದದಿಂದ.

[ **ಟೀಕಾ** :- ತತ್ಕಥಂ ? ಐಶ್ವರ್ಯಾದಿತ್ಯಾಹ- ]

**ಪ್ರತಿಪದಾರ್ಥ** :- ತತ್ = ಆ ಪರಮಾತ್ಮನ ನಾಶಾಭಾವವು, ಕಥಂ = ಹೇಗೆ ? ಐಶ್ವರ್ಯಾತ್ = ಐಶ್ವರ್ಯದ ದೆಸೆಯಿಂದ (ಅಂದರೆ ಅಂತಹ ಅಚಿಂತ್ಯ ಶಕ್ತಿಯು ಪರಮಾತ್ಮನಲ್ಲಿರುವುದರಿಂದ ನಾಶಾಭಾವವು ಕೂಡುತ್ತಿದೆ) ಇತ್ಯಾಹ = ಇಂತೆಂದು ಉತ್ತರವನ್ನು ಹೇಳುತ್ತಿದ್ದಾರೆ "ಈಶ್ವರಃ" ಎಂಬ ಪದದಿಂದ.

[ **ಮೂಲ** :- "........................ಈಶ್ವರಃ" ]

**ಪ್ರತಿಪದಾರ್ಥ** :- ಈಶ್ವರಃ = ಐಶ್ವರ್ಯವುಳ್ಳವನು ಈಶ್ವರನೆನಿಸುವನು.

[ **ಟೀಕಾ** :- ಸ ಚಕಃ ? ಇತ್ಯತೋಽಹಮೇವೇತಿ ಸಪ್ರಮಾಣಕಮಾಹ- ]

**ಪ್ರತಿಪದಾರ್ಥ** :- ಸ ಚ = ಅಂತಹ ಉತ್ತಮ ಪುರುಷನು, ಕಃ ? = ಯಾರು ? ಇತ್ಯತಃ = ಇಂತೆಂಬ ಪ್ರಶ್ನೆ ಬಂದರೆ, ಅಹಮೇವ = ನಾನೇ (ಅಂತಹ ಉತ್ತಮ ಪುರುಷನು) ಇತಿ = ಇಂತೆಂದು, ಸಪ್ರಮಾಣಕಂ ಪ್ರಮಾಣಸಹಿತವಾಗಿ, ಆಹ = ಹೇಳಿದನು (ಶ್ರೀಕೃಷ್ಣನು).

[ **ಮೂಲ** :- ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ]

**ಪ್ರತಿಪದಾರ್ಥ** :- ಯಸ್ಮಾತ್ = ಯಾವ ಕಾರಣ ದೆಸೆಯಿಂದ, ಅಹಂ = ನಾನು, ಕ್ಷರಂ ಚ = ಕ್ಷರ ಚೇತನ ಸಮುದಾಯವನ್ನೂ, ಅತೀತಃ = ದಾಟಿದ್ದೇನೊ, ಅಕ್ಷರಾದಪಿ = ಅಕ್ಷರ ಚೇತನಳಾದ ಮಹಾಲಕ್ಷ್ಮಿಗಿಂತಲೂ, ಉತ್ತಮಃ = ಉತ್ತಮನಾಗಿದ್ದೇನೊ, (ತಸ್ಮಾತ್ = ಆ ಕಾರಣ ದೆಸೆಯಿಂದ), ಲೋಕೇ = ಪೌರುಷೇಯಾಗಮದಲ್ಲಿ, ಚ = ಮತ್ತು, ವೇದೇ = ಅಪೌರುಷೇಯ ಆಗಮದಲ್ಲಿ, ಪುರುಷೋತ್ತಮಃ = ಪುರುಷೋತ್ತಮನಾಗಿ, ಪ್ರಥಿತಃ = ಹೇಳಿಸಿಕೊಳ್ಳಲ್ಪಟ್ಟಿದ್ದೇನೆ.

[ **ಟೀಕಾ** :- ಕ್ಷರು ಚಾತೀತ ಇತಿ ಚಶಬ್ದಾನ್ವಯಃ । ಲೋಕಶಬ್ದೇನ ಪೌರುಷೇಯಾಗಮ ಉಚ್ಯತೇ ]

**ಪ್ರತಿಪದಾರ್ಥ** :- ಕ್ಷರಂ ಚ = ಕ್ಷರ ಚೇತನ ಸಮುದಾಯವನ್ನು, ಅತೀತಃ = ದಾಟಿದ್ದೇನೆ, ಇತಿ = ಇಂತೆಂದು, ಚ ಶಬ್ದಾನ್ವಯಃ = ಮೂಲದಲ್ಲಿರುವ ಚ ಶಬ್ದಕ್ಕೆ ಕ್ಷರ ಶಬ್ದದಿಂದ ಅನ್ವಯವು । ಲೋಕ ಶಬ್ದೇನ = ಇನ್ನು "ಲೋಕೆ" ಎಂಬ ಶಬ್ದದಿಂದ ಪೌರಷೇಯಾಗಮಃ = ಪುರುಷನಿರ್ಮಿತವಾದ ಭಾರತ ಪುರಾಣಾದಿ ಗ್ರಂಥ ಸಮುದಾಯವು, ಉಚ್ಯತೇ = ಹೇಳಲ್ಪಡುತ್ತದೆ.

(—"ತತ್ಕಥಂ" ಎಂಬಲ್ಲಿಂದ ಇಲ್ಲಿಯವರೆಗಿನ ಭಾವಾರ್ಥವು)-ಭಗವಂತನು ಪ್ರವೇಶಿಸಿರುವ ಬ್ರಹ್ಮಾಂಡವು ಮಹಾಪ್ರಲಯ ಕಾಲದಲ್ಲಿ ಭಗವಂತನ ಇಚ್ಛೆಯಿಂದ ನಾಶವಾಗುತ್ತದೆ. ಆದರೆ ಭಗವಂತನು ನಾಶವಾಗುವದಿಲ್ಲ. ಅದೇ ಆ ಶ್ರೀಹರಿಯ ಅಚಿಂತ್ಯಶಕ್ತಿಯು. ಆ ಪುರುಷೋತ್ತಮನು ಯಾರು ಎಂಬ ಪ್ರಶ್ನೆಗೆ "ನಾನೇ ಆಗಿದ್ದೇನೆ" ನಾನೇ ಸರ್ವೋತ್ತಮನು ಎನ್ನುವದು ಪ್ರಾಮಾಣಸಿದ್ಧವಾಗಿದೆ ಎಂದು ಪ್ರತಿಪಾದಿಸಿದ್ದಾರೆ, ಶ್ರೀ ಶ್ರೀಕೃಷ್ಣದೇವರು.

ಹೀಗೆ ತಾನೇ ಸರ್ವೋತ್ತಮ ಎಂಬ ವಿಷಯದಲ್ಲಿ ಯುಕ್ತಿ ಏನೆಂದರೆ— ತಿಳಿಸುತ್ತಿದ್ದಾರೆ. ಕ್ಷರರಾದ ಜೀವರನ್ನೂ ಅಕ್ಷರರಾದ ಶ್ರೀ ಮಹಾಲಕ್ಷ್ಮೀದೇವಿಯರನ್ನು ದಾಟ್ಟಿದ್ದೇ ಈ ವಿಷಯದಲ್ಲಿ ಸಾಧಕವಾಗಿದೆ. ಆದ್ದರಿಂದ ಪೌರುಷೇಯಗಳಾದ ಮಹಾಭಾರತಾದಿಗಳಲ್ಲಿ, ಅಪೌರುಷೇಯಗಳಾದ ವೇದಗಳಲ್ಲಿ ಪುರುಷೋತ್ತಮ ಎಂದು ಹರಿಯನ್ನೇ ಹೇಳಿರುತ್ತದೆ ಎಂದು ತಿಳಿಯತಕ್ಕದ್ದು.

[ **ಟೀಕಾ :-** ತಾತ್ಪರ್ಯದ್ಯೋತನಾಯ ವೇತ್ತುಃ ಫಲಮಾಹ- ]

**ಪ್ರತಿಪದಾರ್ಥ :—** ತಾತ್ಪರ್ಯದ್ಯೋತನಾಯ = (ಪ್ರಕೃತ ಗೀತಾ ಗ್ರಂಥದ) ತಾರ್ಯತ್ಪವನ್ನು ತಿಳಿಸುವುದ ಕ್ಕೋಸ್ಕರ, ವೇತ್ತುಃ = ಆ ಅರ್ಥವನ್ನು ತಿಳಿದುಕೊಂಡವರಿಗೆ ಫಲು = ಫಲವನ್ನು ಆಹ = ಹೇಳಿದನು (ಭಗವಾನ್ ಶ್ರೀಕೃಷ್ಣನು)– 'ಯೋಮಾಮೇವಮ ಸಂಮೂಢೊ...........' ಇತ್ಯಾದಿ ವಾಕ್ಯಗಳಿಂದ–

**ಭಾವಾರ್ಥ :-** ಯಾವುದೇ ಒಂದು ಗ್ರಂಥದ ಮುಖ್ಯ ತಾತ್ಪರ್ಯವು ಎಲ್ಲಿ ಇರುತ್ತದೆ ಎನ್ನುವುದನ್ನು ಸಾಕ್ಷಾತ್ತಾಗಿ ಹೇಳಬೇಕು ಅಥವಾ ಆ ಗ್ರಂಥದ ವಿಷಯವನ್ನು ತಿಳಿದುಕೊಳ್ಳುವುದರಿಂದ ಆಗುವ ಲಾಭವನ್ನಾದರೂ ಹೇಳಬೇಕು. ಆದ್ದರಿಂದ ಶ್ರೀಕೃಷ್ಣನು ತನ್ನ ವಾಕ್ಯದಿಂದಲೇ ವಿಷ್ಣುಸರ್ವೋತ್ತಮತ್ವದಲ್ಲಿಯೇ ತಾತ್ಪರ್ಯವಿದೆ ಎಂಬುದನ್ನು ತಿಳಿಸಲು ಆ ವಿಷ್ಣುಸರ್ವೋತ್ತಮತ್ವ ಜ್ಞಾನದ ಪ್ರಯೋಜನವನ್ನು ಹೇಳುತ್ತಿದ್ದಾನೆ– "ಯೋ ಮಾಮೇವಮ ಸಂಮೂಢೊ..........." ಎಂಬ ವಾಕ್ಯದಿಂದ.

[ **ಮೂಲ :-** "ಯೋ ಮಾಮೇವಮ ಸಂಮೂಢೋ ಜಾನಾತಿ ಪುರುಷೋತ್ತಮಮ್ । ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ।" ]

**ಪ್ರತಿಪದಾರ್ಥ :-** ಭಾರತ = ಹೇ ಅರ್ಜುನನೇ, ಯಃ = ಯಾವನು, ಏವಂ = ಈ ಹಿಂದೆ ಹೇಳಿದಂತೆ. ಅಸಂಮೂಢಃ ಸನ್ = ಮೋಹಾದಿ ದೋಷಗಳು ಇಲ್ಲದವನಾಗಿ, ಮಾಂ ಏವ ಪುರುಷೋತ್ತಮಮ್ = ನನ್ನನ್ನೇ ಪುರುಷೋತ್ತಮನನ್ನಾಗಿ. ಜಾನಾತಿ = ತಿಳಿಯುತ್ತಾನೆಯೋ, (ಮತ್ತು), ಸರ್ವಭಾವೇನ=ಸರ್ವರೀತಿಯಲ್ಲಿಯೂ, ಭಜತಿ = ಸೇವಿಸುತ್ತಾನೋ, ಸಃ = ಅವನು ಸರ್ವವಿತ್ = ಸರ್ವಜ್ಞನು.

[ **ಟೀಕಾ :-** ಏವಮಿತ್ಯಸ್ಯ ವ್ಯಾವೃತ್ತಿನಿರಾಸಃ ಅಸಂಮೂಢ ಇತಿ । ನ ಪುನರಶ್ವಕರ್ಣಾದಿವತ್ಸಂಜ್ಞಾ ಮಾತ್ರತ್ವೇನೇತ್ಯರ್ಥಃ । ಸ ಸರ್ವವಿತ್ । ಅಸ್ಯೈವ ಶಾಸ್ತ್ರಾರ್ಥತ್ವಾತ್ । ಸರ್ವಭಾವೇನ ಸರ್ವಪ್ರಕಾರೇಣ ]

**ಪ್ರತಿಪದಾರ್ಥ :-** ಅಸಂಮೂಢಃ = ಇತಿ = ಅಸಂಮೂಢಃ ಎಂಬ ಪದದಿಂದ, ಏವಂ ಇತ್ಯಸ್ಯ = ಏವಂ ಎಂಬ ಶಬ್ದದ, ವ್ಯಾವೃತ್ತಿನಿರಾಸಃ = ವ್ಯಾವೃತ್ತಿ=ತಾತ್ಪರ್ಯ ಇಲ್ಲ ಎಂಬ ಅರ್ಥದ, ನಿರಾಸಃ =ನಿರಾಕರಣವು । ಪುನಃ = ಮತ್ತು, ಅಶ್ವಕರ್ಣಾದಿವತ್ಸಂಜ್ಞಾ ಮಾತ್ರತ್ವೇನ = ಅಶ್ವಕರ್ಣ ಶಬ್ದವು ವೃಕ್ಷವಿಶೇಷಕ್ಕೆ ನಾಮಮಾತ್ರ ವಾಗಿರುವಂತೆಯೇ, ಪರಮಾತ್ಮನು ನಾಮಮಾತ್ರದಿಂದ ಪುರುಷೋತ್ತಮನು, ಇತ್ಯರ್ಥಃ ನ = ಎಂದು ಅರ್ಥವಲ್ಲ ಸಃ = (ಈ ಸರ್ವೋತ್ತಮತ್ವ ವಿಷಯವನ್ನು ಯಾರು ತಿಳಿದಿದ್ದಾರೋ) ಅವನು ಸರ್ವವಿತ್ = ಸರ್ವಜ್ಞನು.

**ಭಾವಾರ್ಥ :-** ಅಶ್ವಕರ್ಣ ಇತ್ಯಾದಿ ಶಬ್ದಗಳಂತೆ ಭಗವಂತನಿಗೆ "ಪುರುಷೋತ್ತಮ ಶಬ್ದವು ಅಂಕಿತ ನಾಮವಲ್ಲ; ಅನ್ವರ್ಥಕ ನಾಮವಾಗಿದೆ. ಏಕೆಂದರೆ ಇಂತಹ ಶ್ರೀಹರಿ ಸರ್ವೋತ್ತಮತ್ವವನ್ನು ಯಾರು ತಿಳಿಯುತ್ತಾರೋ ಅವರು ಸಂಸಾರಕ್ಕೆ ಬಂದಾಗ ಅವಶ್ಯವಾಗಿ ತಿಳಿಯಬೇಕಾದ್ದನ್ನು ತಿಳಿದಂತಾಯಿತು. ಎಂದು ಭಗವಂತನಜ್ಞಾನಕ್ಕೆ ಫಲವನ್ನು ಹೇಳುತ್ತಾರೆ.

[ **ಟೀಕಾ :** ಏತಚ್ಚ ನ ಯಸ್ಮೈಕಸ್ಮೈ ವಾಚ್ಯಮಿತ್ಯಾಹ- ]

**ಪ್ರತಿಪದಾರ್ಥ :-** ಏತಚ್ಚ = ಈ ಮೇಲೆ ಹೇಳಿದ ವಿಷಯವನ್ನು. ಯಸ್ಮೈಕಸ್ಮೈ ಯಾವನಿಗೂ ಒಬ್ಬನಿಗೆ (ಅಂದರೆ ಶಾಸ್ತ್ರಾಧಿಕಾರಿಯಾಗದೆ ಇರುವವನಿಗೆ. ನ ವಾಚ್ಯಮ್ = ಹೇಳತಕ್ಕದ್ದಲ್ಲ. ಈ ರೀತಿ ಹೇಳುತ್ತಾನೆ ಭಗವಾನ್ ಶ್ರೀಕೃಷ್ಣನು ಮುಂದಿನ ಶ್ಲೋಕದಿಂದ – ಭಾವಾರ್ಥ – ಈ ವಿಷಯವನ್ನು ಕಂಡ ಕಂಡವರಿಗೆ ಹೇಳಬಾರದು ಎಂದು ಹೇಳಿದನು.

[ **ಮೂಲ :-** "ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ" ]

**ಪ್ರತಿಪದಾರ್ಥ :-** ಅನಘ = ಪಾಪರಹಿತನಾದ ಅರ್ಜುನನೇ ಮಯಾ = ನನ್ನಿಂದ, ಇತಿ = ಸರ್ವವಿತ್ ಭಜತಿ ಇತ್ಯಾದಿ ವಾಕ್ಯದಿಂದ, ಇದಂ = ಈ, ಗುಹ್ಯತಮಂ = ಅತ್ಯಂತ ಗೌಪ್ಯವಾದಂತಹ, ಶಾಸ್ತ್ರಂ=ತತ್ವವು, ಉಕ್ತಂ = ಹೇಳಲ್ಪಟ್ಟಿರುತ್ತದೆ.

**ಭಾವಾರ್ಥ :-** ಪಾಪರಹಿತ ಅರ್ಜುನಗೆ ನಿನಗೆ ಈ ಗುಹ್ಯತಮನ ವಿಷಯವನ್ನು ಹೇಳಿದ್ದೇನೆ. (ಉಪದೇಶ ಪ್ರತಿಬಂಧಕವಾದಪಾಪವು ನಿನ್ನಲ್ಲಿ ಇಲ್ಲವಾದ್ದರಿಂದ)

[ **ಟೀಕಾ :-** ಸ ಸರ್ವವಿದಿತ್ಯಾದ್ಯುಕ್ತಂ । ತತಃ ಕಿಮಿತ್ಯತ ಆಹ- ]

**ಪ್ರತಿಪದಾರ್ಥ :-** ಸಃ – ಅವನು ಸರ್ವವಿತ್ ಸರ್ವಜ್ಞನು ಇತ್ಯಾದಿ - ಈ ಮೊದಲಾದ್ದು ಉಕ್ತಂ - ಹೇಳಲ್ಪಟ್ಟದೆ. ತತಃ - ಅದರಿಂದ ಕಿಂ - ಪ್ರಕೃತದಲ್ಲಿ ಏನು ಉಪಯೋಗ ಇತ್ಯತಃ ಆಹ ಎಂಬ ಪ್ರಶ್ನೆ ಬಂದರೆ ಹೇಳುತ್ತಾರೆ.

[ **ಮೂಲ :-**" ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ" ]

**ಪ್ರತಿಪದಾರ್ಥ :-** ಭಾರತ = ಹೇ ಅರ್ಜುನನೇ ಏತತ್ = ನನ್ನ ಸರ್ವೋತ್ತಮತ್ವವನ್ನು (ಹಿಂದೆ ಹೇಳಿದ ಪದ್ಧತಿಯಲ್ಲಿ), ಬುದ್ಧ್ವಾ = ತಿಳಿದುಕೊಂಡು, ಬುದ್ಧಿಮಾನ್ - ಸ್ಯಾತ್ = ಅಪರೋಕ್ಷ ಜ್ಞಾನಿಯಾದವನು, ಚ = ಮತ್ತು, ಕೃತ್ಯತತ್ಯಃ = ಮುಕ್ತ ಸ್ಯಾತ್ = ಆಗುವನು (ನೀನು ಆಗು).

[ **ಟೀಕಾ :-** ಬುದ್ಧಿಮಾನ್ ಅಪರೋಕ್ಷಜ್ಞಾನೀ ಕೃತಕೃತ್ಯೋ ಮುಕ್ತಃ ]

**ಪ್ರತಿಪದಾರ್ಥ :-** ಬುದ್ಧಿಮಾನ್=(ಮೂಲದಲ್ಲಿರುವ 'ಬುದ್ಧಿಮಾನ್' ಶಬ್ದಕ್ಕೆ) ಅಪರೋಕ್ಷಜ್ಞಾನೀ ಎಂದರ್ಥ. ಹಾಗೆಯೇ, ಕೃತಕೃತ್ಯಃ = ಮೂಲದಲ್ಲಿರುವ 'ಕೃತಕೃತ್ಯ' ಶಬ್ದಕ್ಕೆ ಮುಕ್ತನು ಎಂದರ್ಥ.

**ಭಾವಾರ್ಥ :-** ಈ ವರೆಗೆ ನಾನು ಉಪದೇಶಿಸಿದಂತೆ **ತಿಳಿದವನು ಉಪಸನೆಮಾಡಿ** ನನ್ನ ಅಪರೋಪಜ್ಞಾನವನ್ನೂ — ಮತ್ತು ಪ್ರಸಾದವನ್ನು ಹೊಂದಿ ಮುಕ್ತನಾಗುವನು. ಅದರಂತೆ ನೀನು ಆಗಬೇಕು.

[ **ಮೂಲ :-** " ಇಂದ್ರಿಯೇಭ್ಯಃ ಪರಾಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ । ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ । ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ । ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ " ]

**ಪ್ರತಿಪದಾರ್ಥ :-** ಇಂದ್ರಿಯೇಭ್ಯಃ = ಇಂದ್ರಿಯಾಭಿಮಾನಿ ದೇವತೆಗಳಿಗಿಂತ, ಅರ್ಥಾಃ = ಅರ್ಥಾಭಿಮಾನಿ ದೇವತೆಗಳು, ಪರಾಃ = ಉತ್ತಮರಾಗಿರುವರು. ಚ = ಮತ್ತು, ಅರ್ಥೇಭ್ಯಃ = ಅರ್ಥಾಭಿಮಾನಿಗಳಿಗಿಂತ, ಮನಃ = ಮನೋಭಿಮಾನಿ ದೇವತೆಗಳು, ಪರಾಃ = ಉತ್ತಮರು. ಮನಸಸ್ತು = ಮನಸ್ತತ್ವಾಭಿಮಾನಿ ಶ್ರೀ ರುದ್ರದೇವರಿಗಿಂತ, ಪರಾ - ಶ್ರೇಷ್ಠವಾದದ್ದು - ಬುದ್ಧಿಃ - ಬುದ್ಧಿ ತತ್ವವು ಅಂದರೆ ಬುದ್ಧಿ ತತ್ವಾಭಿಮಾನಿನೀ ಶ್ರೀ ಸರಸ್ವತೀದೇವಿಯರು. ಬುದ್ಧೇಃ ಈ ಬುದ್ಧಿ ತತ್ವಾಭಿಮಾನಿನೀ ಶ್ರೀ ಸರಸ್ವತೀದೇವಿಯರಿಂದ ಮಹಾನ್ - ಮಹತ್ತತ್ವಾಭಿಮಾನಿ ಶ್ರೀ ಬ್ರಹ್ಮದೇವರು ಪರಃ = ಶ್ರೇಷ್ಠರು. ಮಹತಃ - ಮಹತತ್ತ್ವಾಭಿಮಾನಿ ಶ್ರೀ ಬ್ರಹ್ಮ ದೇವರಿಗಿಂತ, ಅವ್ಯಕ್ತ ಪರಂ - ಅವ್ಯಕ್ತಂ ತತ್ವಾಭಿಮಾನಿನೀ ಶ್ರೀ ರಮಾದೇವಿಯರು ಶ್ರೇಷ್ಠರು, ಅವ್ಯಕ್ತಾತ್ ಅವ್ಯಕ್ತ ತತ್ವಾಭಿಮಾನಿ ಶ್ರೀ ರಮಾದೇವಿಯರಿಗಿಂತ ಪುರುಷಃ ಪುರುಷಶಬ್ದವಾಚ್ಯನಾದ ಶ್ರೀಹರಿಯು ಪರಃ - ಶ್ರೇಷ್ಠದು ಪುರುಷಾತ್ - ಪುರುಷಶಬ್ದವಾಚನಾವ ಶ್ರೀಹರಿಯ ದೆಶೆಯಿಂದ ಪರಂ ಶ್ರೇಷ್ಠವಾದದ್ದು ಪರಂ — ಇನ್ನೊಂದಿಲ್ಲ - ಸಾ ಕಾಷ್ಠಾ - ಅದೇ ನಮ್ಮ ಗುರಿಯು । ಸಾ ಪರಾಗತಿಃ ಅದೇ ಶ್ರೇಷ್ಠ ಆಶ್ರಯರು.

1) ಇಂದ್ರಿಯಾಭಿಮಾನಿ ದೇವತೆಗಳು ಮೇಲೆ. 2) ಅರ್ಥಾಭಿಮಾನಿಗಳು ದೇವತೆಗಳು ಅವರಮೇಲೆ. 3) ಮನಸ್ತತ್ವಾಭಿಮಾನಿ ಶ್ರೀ ರುದ್ರದೇವರು ಅವರಮೇಲೆ. 4) ಬುದ್ಧಿತತ್ವಾಭಿಮಾನಿ ಶ್ರೀ ಸರಸ್ವತಿ ಅವರಮೇಲೆ. 5) ಮಹತ್ತತ್ವಾಭಿಮಾನಿ ಶ್ರೀ ಬ್ರಹ್ಮದೇವರು ಅವರಮೇಲೆ. 6) ಅವ್ಯಕ್ತತತ್ವಾಭಿಮಾನಿ ಶ್ರೀ ರಮಾದೇವಿಯ ಅವರಮೇಲೆ. 7) ಪುರುಷಶಬ್ದ ಶ್ರೀಹರಿಯು ವಾಚ್ಯನು ಈ ಕ್ರಮದಲ್ಲಿ ತಾರತಮ್ಯ ಹೊಂದಿರುವರು.

[ **ಟೀಕಾ :-** ಆತ್ಮಾ ಮಹಾನಿತಿ ಸಾಮಾನಾಧಿಕರಣ್ಯಮ್ । ನ ಪರಂ ಕಿಂಚಿತ್ ಕಿಂತು ? ಸಾ ಕಾಷ್ಠಾ ಸ ಏವಾವಧಿಃ । ಕುತ ಏತತ್ । ಸಾ ಪರಾ ಗತಿಃ । ಗಮ್ಯತ ಇತಿ ಗತಿಃ ]

**ಪ್ರತಿಪದಾರ್ಥ :—** ಮೂಲದಲ್ಲಿರುವ ಆತ್ಮಾ, ಮಹಾನ್ ಶಬ್ದಗಳಿಗೆ ಸಂಬಂಧವನ್ನು ತೋರಿಸುತ್ತದೆ— "ಆತ್ಮಾ" ಮಹಾನಿತಿ ಎಂಬಲ್ಲಿ ಆತ್ಮಾ - ಮಹಾನ್, ಇತಿ - ಆತ್ಮಾ - ಮಹಾನ್ ಎಂಬ ಪರಮ ಸಾಮಾನಾಧಿ ಕರಣ್ಯಂ - ಆತ್ಮತ್ವ ಮಹತ್ವಗಳಿಗೆ ಸಾಮಾನಾಧಿಕರಣ್ಯವನ್ನು ತಿಳಿಸುತ್ತಾರೆ - ಪರಂ - ಭಿನ್ನವಾದದ್ದು ಕಿಂಚಿತ್ - ಯಾವದು ನ - ಇಲ್ಲ - ಆದರೆ ಸಾಕಾಷ್ಠಾ (ಈ ಮೂಲದ ಅರ್ಥ) ನಮ್ಮ ಅವಧಿಃ - ಅವನೇ ನಮ್ಮ ಕೊನೆಯ ಅವಧಿಯು. ಏತತ್ - ಇದು ಕುತಃ - ಎಂದರೆ - ಸಾ ಪರಾಗತಿಃ ಅವನೇ ಶುದ್ಧ ಪರಾಗತಿ - ಆಶ್ರಯನಾಗಿದ್ದಾನೆ "ಗಮ್ಯತೇ ಇತಿ, ಹೊಂದಲ್ಪಡುತ್ತಾನೆ ಇತಿ—ಇಂತೆಂದು ಗತ್ರಿ—ಗತಿ ಶಬ್ದವಾಚ್ಯನು.

**ಭಾವಾರ್ಥ :-** ಬುದ್ಧಿತ್ವಕ್ಕಿಂತ ಶ್ರೇಷ್ಠರು ಆತ್ಮನು ಮತ್ತು 'ಮಹತ್ತು ಎಂದು ತಿಳಿಯಬಾರದು ಮಹತತ್ವಾಭಿಮಾನಿ ಆತ್ಮನೇ ಬ್ರಹ್ಮದೇವರು ಎಂದು ತಿಳಿಸುತ್ತಿದ್ದಾರೆ. ಶ್ರೀಹರಿಯೇ ನಮ್ಮ ಮುಖ್ಯ ಉದ್ದೇಶ ಅವನೇ ಆಶ್ರಯನು.

[ ಟೀಕಾ :- ಆತ್ಮಾ ಮಹಾನಿತಿ ಸಾಮಾನಾಧಿಕರಣ್ಯಮ್ । ನ ಪರಂ ಕಿಂಚಿತ್ ಕಿಂತು ? ಸಾ ಕಾಷ್ಠಾ ಸಾ ಸ ಏವಾಧಿಃ । ಕುತಃ ಏತತ್ । ಸಾ ಪರಾ ಗತಿಃ । ಗಮ್ಯತ ಇತಿ ಗತಿಃ ]

**ಪ್ರತಿಪದಾರ್ಥ** :— ಆತ್ಮಾ ಮಹಾನಿತಿ = 'ಆತ್ಮಾ ಮಹಾನ್' ಇಂತೆಂದು ಹೇಳಿದ್ದು ಸಾಮಾನಾಧಿಕರಣ್ಯಮ್ = ಆತ್ಮತ್ವ ಮತ್ತು ಮಹತ್ವಗಳಿಗೆ ಏಕತ್ರಾವಸ್ಥಾನವನ್ನು ಅಂದರೆ ಒಂದೇ ಆಶ್ರಯದಲ್ಲಿರುವುದನ್ನು ಅಭಿಪ್ರಾಯ ಇಟ್ಟುಕೊಂಡು ಹೇಳಿದ್ದು. ಪರ=ಉತ್ತಮರು, ಕಿಂಚಿತ್ ನ=ಯಾರೂ ಇಲ್ಲ. ಕಿಂತು ? = ಏಕೆಂದರೆ ? ಸಾ ಕಾಷ್ಠಾ = ಅದೇ ಉತ್ತಮತ್ವಕ್ಕೆ ಪರಮಾವಧಿಯು। ಕುತಃ=ಏತಕ್ಕೆ (ಅವನೇ ಪರಮಾಧಿಯು ಎಂಬ ಪ್ರಶ್ನೆ ಬಂದರೆ ಅದಕ್ಕೆ ಉತ್ತರವನ್ನು ಕೊಡುತ್ತಿದ್ದಾರೆ) ಸಾ ಪರಾ ಗತಿಃ ಆ ಶ್ರೀಹರಿಯೇ ಸರ್ವೋತ್ತಮತ್ವಕ್ಕೆ ಗತಿಯು.

**ಭಾವಾರ್ಥ** :- ('ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಎಂದು ಆರಂಭಿಸಿ 'ಸಾ ಕಾಷ್ಠಾ ಸಾ ಪರಾ ಗತಿಃ' ಎಂಬಲ್ಲಿಯ ವರೆಗಿನವುಗಳು ಕಠೋಪನಿಷತ್ತಿನ ಶ್ರುತಿವಾಕ್ಯಗಳಾಗಿರುತ್ತವೆ. ಇವೂ ವಿಷ್ಣುಸರ್ವೋತ್ತಮತ್ವವನ್ನೇ ಪ್ರತಿಪಾದಿಸುತ್ತವೆ.)

"ಇಂದ್ರಿಯಾಭಿಮಾನಿದೇವತೆಗಳಿಗಿಂತ[1] ಅರ್ಥಾಭಿಮಾನಿ ದೇವತೆಗಳು[2] ಉತ್ತಮರಾಗಿರುವರು. ಅವರಿಗಿಂತ ಮನೋಭಿಮಾನಿದೇವತೆಗಳು[3] ಉತ್ತಮರು. ಅವರಿಗಿಂತ ಬುದ್ಧ್ಯಭಿಮಾನಿದೇವತೆಯಾದ ಸರಸ್ವತಿಯೂ, ಅವಳಿಗಿಂತ ಮಹತ್ತತ್ವಾಭಿಮಾನಿದೇವತೆಯಾದ ಚತುರ್ಮುಖನೂ, ಅವನಿಗಿಂತ ಪ್ರಕೃತ್ಯಭಿಮಾನಿದೇವತೆಯಾದ ಮಹಾಲಕ್ಷ್ಮಿಯೂ ಉತ್ತಮರಾಗಿರುವರು. ಪುರುಷನೆಂದು ಶ್ರುತಿಗಳಲ್ಲಿ ಪ್ರಖ್ಯಾತನಾದ ಶ್ರೀಮನ್ನಾರಾಯಣನು ಮಹಾಲಕ್ಷ್ಮಿಗಿಂತಲೂ ಉತ್ತಮನಾಗಿರುವನು. ಅವನಿಗಿಂತ ಉತ್ತಮನು ಯಾವನೂ ಇರುವುದಿಲ್ಲ. ಇವನೇ ಉತ್ತಮತ್ವದ ಕೊನೆಯ ಅವಧಿಯಾಗಿರುವನು. ಉತ್ತಮತ್ವದ ಅಂತಿಮಾವಧಿತ್ವವೇ ಸರ್ವೋತ್ತಮತ್ವವಾಗಿರುವುದು. ಸರ್ವೋತ್ತಮತ್ವರೂಪಪ್ರಕಾರವಿಶಿಷ್ಟನಾಗಿ ಶ್ರೀಮನ್ನಾರಾಯಣನು ವೇದಾದಿ ಸಮಸ್ತಶಾಸ್ತ್ರಗಳಿಂದಲೂ ಮುಖ್ಯವಾಗಿ ಪ್ರತಿಪಾದಿಸಲ್ಪಡುವನು. ಸರ್ವಶಾಸ್ತ್ರಗಳಿಂದಲೂ ಇವನೇ ಪ್ರತಿಪಾದ್ಯನಾಗಿರುವುದರಿಂದ ಇವನೇ ಸರ್ವೋತ್ತಮ ನೆನಿಸುವನು." ಇಂತಿದು ಕಠಶ್ರುತಿಗಳ ಅರ್ಥವಾಗಿರುತ್ತದೆ.

[ ಟೀಕಾ :- ಏವಂ ಸರ್ವ ಶಾಸ್ತ್ರೈಃ ಪ್ರತಿಪಾದ್ಯತ ಇತ್ಯಾಹ- ]

**ಪ್ರತಿಪದಾರ್ಥ** :- ಏವಂ = ಈ ರೀತಿಯಾಗಿ, ಸರ್ವ ಶಾಸ್ತ್ರೈಃ = ಸಕಲ ಶಾಸ್ತ್ರಗಳಿಂದ, ಪ್ರತಿಪಾದ್ಯತೆ = ಹೇಳಲ್ಪಡುತ್ತದೆ, ಇತಿ = ಈ ವಿಷಯದಲ್ಲಿ ಆಹ = ಸೂತ್ರಕಾರರಾದ ಶ್ರೀ ವೇದವ್ಯಾಸದೇವರು ಹೇಳಿದರು-

[ ಮೂಲ :- "ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾಹಿ ದರ್ಶಯಂತಿ" ]

---

1. ಚಂದ್ರ, ಕುಬೇರ, ಸೂರ್ಯ, ವರುಣ, ಅಶ್ವಿನೀದೇವತೆಗಳು, ಅಗ್ನಿ, ಇಂದ್ರ, ಜಯಂತ, ಯಮ ಮತ್ತು ದಕ್ಷ ಇವರು ಇಂದ್ರಿಯಾಭಿಮಾನಿದೇವತೆಗಳಾಗಿರುವರು.
2. ಸೌಪರ್ಣೀ, ವಾರುಣೀ ಮತ್ತು ಉಮಾ ಈ ಮೂವರು ಅರ್ಥಾಭಿಮಾನಿದೇವತೆಗಳಾಗಿರುವರು.
3. ರುದ್ರ, ಗರುಡ ಮತ್ತು ಶೇಷ ಈ ಮೂವರು ಮನೋಭಿಮಾನಿದೇವತೆಗಳಾಗಿರುವರು.

**ಪ್ರತಿಪದಾರ್ಥ :—** ಕ್ರತುವತ್ - ಅವಭೃತವಿರುವ ಯಜ್ಞಕ್ಕೆ (ಎಲ್ಲ ಯಜ್ಞಗಳಿಗಿಂತ) ಶ್ರೇಷ್ಠತೆ ಇರುವಂತೆ, ಭೂಮ್ನಃ – ಪೂರ್ಣತ್ವ ಎಂಬ ಗುಣಕ್ಕೆ ಜ್ಯಾಯಸ್ತ್ವಂ = ಸರ್ವಶ್ರೇಷ್ಠತೆ ಇರುತ್ತದೆ. **ತಥಾಹಿ** – ಅದರಂತೆಯೇ ದರ್ಶಯತಿ = ಪ್ರಮಾಣ ತೋರಿಸುತ್ತದೆ.

[ **ಟೀಕಾ :–** ಸರ್ವಗುಣೇಷು ಭೂಮಗುಣಸ್ಯ ಜ್ಯಾಯಸ್ತ್ವಂ ಮುಖ್ಯತೋ ವೇದಪ್ರತಿಪಾದ್ಯತ್ವಮಿತಿ ಸೂತ್ರಾರ್ಥೋಽತ್ರಾಭಿಮತಃ ]

**ಪ್ರತಿಪದಾರ್ಥ :–** ಸರ್ವಗುಣೇಷು – ಎಲ್ಲ ಗುಣಗಳಲ್ಲಿ ಭೂಮಗುಣಸ್ಯ - ಪರಿಪೂರ್ಣತೆ ಎಂಬ ಗುಣಕ್ಕೆ ಜ್ಯಾಯಸ್ತ್ವಂ ಅಂದರೆ = ಮುಖ್ಯತೋ ವೇದಪ್ರತಿಪಾದ್ಯತ್ವಂ = ವೇದದಿಂದ ಮುಖ್ಯವಾಗಿ ಹೇಳಲ್ಪಟ್ಟಿರುವಿಕೆಯು ಇಲ್ಲಿ - ಇಂತೆಂದು ಅತ್ರ - ಇಲ್ಲಿ ಸೂತ್ರಾರ್ಥಃ ಈ ಸೂತ್ರಾರ್ಥವು ಅಭಿಮತ - ಸಮ್ಮತವಾಗಿದೆ.

**ಭಾವಾರ್ಥ :–** ವಿಷ್ಣುವಿನ ಸರ್ವೋತ್ತಮತ್ವರೂಪವಾದ ಭೂಮವೆಂಬ ಗುಣವು ಸಮಸ್ತ ವೇದಗಳಿಂದ ಮುಖ್ಯವಾಗಿ ಪ್ರತಿಪಾದಿಸಲ್ಪಡುತ್ತದೆ ಎಂಬ ವಿಷಯದಲ್ಲಿ ಆಚಾರ್ಯರು 'ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾಹಿ ದರ್ಶಯತಿ' ಎಂಬ ಬ್ರಹ್ಮಸೂತ್ರವನ್ನು ಪ್ರಮಾಣವನ್ನಾಗಿ ಉದಾಹರಿಸಿದ್ದಾರೆ.

ಆಚಾರ್ಯರ ಭಾಷ್ಯಾನುಸಾರವಾಗಿ ಈ ಬ್ರಹ್ಮಸೂತ್ರದ ಅರ್ಥ :—

"ಪೂರ್ಣತ್ವರೂಪವಾದ ಭೂಮವೆಂಬ **ಗುಣವು** ವಿಷ್ಣುವಿನ ಜ್ಞಾನಾನಂದಾದಿ **ಸರ್ವಗುಣಗಳೊಡನೆ ಸರ್ವರಿಗೂ ಉಪಾಸಿಸಲು ಯೋಗ್ಯವಾಗಿರುತ್ತದೆ. ಕರ್ಮಗಳ ನಡುವೆ ಸರ್ವಯಜ್ಞಾಂಗಗಳಾದ ದೀಕ್ಷಾದಿರೂಪ**[1] ಕ್ರಿಯೆಗಳ ಸಮುದಾಯದಂತೆ ಶ್ರೀ ಪರಮಾತ್ಮನ ಸರ್ವಗುಣಗಳ ನಡುವೆ ಇತರ ಸರ್ವಗುಣಗಳನ್ನೂ ಅನುಸರಿಸುವ ಈ ಭೂಮನಾಮಕಪೂರ್ಣತ್ವಗುಣವು ಅತಿಶ್ರೇಷ್ಠವಾಗಿರುತ್ತದೆ. ಗೌಪವನಶ್ರುತಿಯು ಈ ಸಂಗತಿಯನ್ನು ಸ್ಪಷ್ಟಪಡಿಸುತ್ತದೆ". ಈ ರೀತಿಯಾಗಿ ಆಚಾರ್ಯರು ಭಾಷ್ಯದಲ್ಲಿ ಈ ಸೂತ್ರಾರ್ಥವನ್ನು ಹೇಳಿರುವರು. ಆದರೂ ಬ್ರಹ್ಮಸೂತ್ರಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಈ ಸೂತ್ರಕ್ಕೆ ಆಚಾರ್ಯರು "ಸರ್ವೋತ್ತಮತ್ವರೂಪ ಭೂಮಗುಣವು ಸರ್ವವೇದಪ್ರತಿಪಾದ್ಯವಾಗಿರುತ್ತದೆ" ಎಂಬ ಅರ್ಥವನ್ನು ವಿವಕ್ಷಿಸಿಕೊಂಡಿರುತ್ತಾರೆ, ಆದುದರಿಂದ ಈ ಗ್ರಂಥಕ್ಕೆ ಭಾಷ್ಯದೊಡನೆ ವಿರೋಧವಿರುವುದಿಲ್ಲ.

[ **ಮೂಲ :–** "ಇತಿ ವಿಷ್ಣೋಃ ಸರ್ವೋತ್ತಮತ್ವಮೇವ ಶಾಸ್ತ್ರಾರ್ಥತ್ವೇನ ಭಗವತಾ ಶ್ರುತ್ಯಾಚಾಭಿಹಿತಮ್ ।" ]

**ಪ್ರತಿಪದಾರ್ಥ :–** ಇತಿ = ಈ ರೀತಿಯಾಗಿ, ವಿಷ್ಣೋಃ = ಶ್ರೀಹರಿಯ, ಸರ್ವೋತ್ತಮತ್ವಮೇವ = ಸರ್ವೋತ್ತಮತ್ವವೇ. ಶಾಸ್ತ್ರಾರ್ಥತ್ವೇನ = ಸಕಲ ಶಾಸ್ತ್ರಾರ್ಥವೆಂದು, ಭಗವತಾ = ಭಗವಾನ್ ಶ್ರೀಕೃಷ್ಣನಿಂದ, ಚ = ಮತ್ತು, ಶ್ರುತ್ಯಾ = ವೇದದಿಂದಲೂ, ಅಭಿಹಿತಮ್ = ಹೇಳಲ್ಪಟ್ಟಿದೆ.

[ **ಟೀಕಾ :** ಏವಂ ಪ್ರಕರಣಾರ್ಥಮುಪಪಾದ್ಯ ತಸ್ಯ ಪ್ರಯೋಜನಮಾಹ– ]

---

1. ದೀಕ್ಷಾ, ಪ್ರಾಯಣೀಯ, ಉದಯನೀಯ, ಪ್ರಾತಃಸವನೀಯ, ಮಾಧ್ಯಂದಿನಸವನೀಯ, ಸಾಯಂಸವನೀಯ ಗಳೆಂಬ ಮೂರುಸವನಗಳ ಸಮುದಾಯ ಮತ್ತು ಅವಭೃಥ ಇವು ಐದು ಸರ್ವಯಜ್ಞಾಂಗಗಳಾದ ಕ್ರಿಯೆಗಳ ಸಮುದಾಯವಾಗಿರುತ್ತದೆ.

**ಪ್ರತಿಪದಾರ್ಥ** :- ಏವಂ = ಈ ರೀತಿಯಾಗಿ, ಪ್ರಕರಣಾರ್ಥಂ = ಮಾಯಾವಾದ ಎಂಬ ಪ್ರಕರಣದ ಅರ್ಥವನ್ನು, ಉಪಪಾದ್ಯ = ಯುಕ್ತಿಪೂರ್ವಕವಾಗಿ ಪ್ರತಿಪಾದಿಸಿ. ತಸ್ಯ = ಆ ಪ್ರಕರಣಕ್ಕೆ. ಪ್ರಯೋಜನವಮ್ = ಪ್ರಯೋಜನವನ್ನು, ಆಹ = ಹೇಳುತ್ತಾರೆ—

[ **ಮೂಲ** :- "ಇತಿ ಸರ್ವಜ್ಞಮುನಿನಾ ಮಾಯಾವಾದ ತಮೋऽಖಿಲಮ್ । ನಿರಸ್ತಂ ತತ್ತ್ವವಾದೇನ ಸತಾಂ ಸಂಶಯನುತ್ತಯೇ" ]

**ಪ್ರತಿಪದಾರ್ಥ** :- ಇತಿ = ಈ ರೀತಿಯಾಗಿ, ಸತಾಂ = ಸಜ್ಜನರ, ಸಂಶಯನುತ್ತಯೇ = ಸಂಶಯ ಪರಿಹಾರಕ್ಕೋಸ್ಕರ, ಅಖಿಲಂ = ಸಮಸ್ತವಾದಂತಹ, ಮಾಯಾವಾದ ತಮಃ = ಮಾಯಾವಾದ ಎಂಬ ತಮಸ್ಸು, ತತ್ತ್ವವಾದೇನ = ತತ್ತ್ವವಾದದಿಂದ, ನಿರಸ್ತಂ = ನಿರಾಕರಿಸಲ್ಪಟ್ಟಿತು.

[ **ಟೀಕಾ** :- ಅನ್ಯಥಾ ಹಿ ವಿಪ್ರತಿಪತ್ತೇಃ ಸಂಶಯೋ ಭವತಿ ]

**ಪ್ರತಿಪದಾರ್ಥ** :- ಅನ್ಯಥಾ= ಒಂದು ವೇಳೆ ಶ್ರೀ ಮದಾಚಾರ್ಯರು ಖಂಡನ ಮಾಡಿರದಿದ್ದರೆ, ವಿಪ್ರತಿಪತ್ತೇಃ= ವಿರುದ್ಧಾರ್ಥವನ್ನು ಹೇಳುವ ವಾಕ್ಯವಿರುವುದರಿಂದ ಸಂಶಯಃ = ಸಂಶಯವು ಭವತಿ = ಉಂಟಾಗುತ್ತದೆ. ಹಿ = ನಿಶ್ಚಯವು.

**ಭಾವಾರ್ಥ:**- **ವಿಷ್ಣುಸರ್ವೋತ್ತಮತ್ವವೇ ಸರ್ವಶಾಸ್ತ್ರ ಪ್ರತಿಪಾದ್ಯ**ವೆಂಬ ಈ ಪ್ರಕರಣಾರ್ಥವನ್ನು ಇಂತು ಆಚಾರ್ಯರು **ಸಮರ್ಥಿಸಿದರು. ಈಗ ಈ ಸಮರ್ಥನೆಯಿಂದುಂಟಾದ ಪ್ರಯೋಜನವನ್ನು** 'ಇತಿ ಸರ್ವಜ್ಞಮುನಿನಾ' ಇತ್ಯಾದಿ. **ಶ್ಲೋಕದಿಂದ ಹೇಳುತ್ತಾರೆ. ಶ್ಲೋಕಾರ್ಥ** :—

"ತಮಸ್ಸು ಹರಡಿಕೊಂಡಿದ್ದರೆ ಹತ್ತಿರವಿದ್ದ ವಸ್ತುವಿನಲ್ಲಿಯೂ 'ಇದಂ ಏತಹುದು' ಎಂಬ ಸಂಶಯ ವುಂಟಾಗುತ್ತದೆ. ಸೂರ್ಯನು ತನ್ನ ಬೆಳಕಿನಿಂದ ಆ ತಮಸ್ಸನ್ನು ನಿವಾರಿಸುವನು. ಆಗ ಸಂಶಯ ತೊಲಗಿ ಆ ವಸ್ತುವಿನ ನಿಶ್ಚಯವುಂಟಾಗುತ್ತದೆ. ಜೀವಬ್ರಹ್ಮೈಕ್ಯವೇ ಸಮಸ್ತ ಶಾಸ್ತ್ರಪ್ರತಿಪಾದ್ಯವೆಂದು ಮಾಯಿಮತವು ಹೇಳುತ್ತದೆ· ಇದು ತಮಸ್ಸಿನಂತೆ ಲೋಕವನ್ನು ಹರಡಿ ವಿಷ್ಣುಸರ್ವೋತ್ತಮತ್ವವು ಶಾಸ್ತ್ರಪ್ರತಿಪಾದ್ಯವಹುದೋ ? ಅಲ್ಲವೋ ? ಎಂಬ ಆಕಾರದ ಸಂಶಯವನ್ನುಂಟುಮಾಡಿರುತ್ತದೆ. ತನ್ನ ಕಿರಣಗಳ ಪ್ರಸಾರಣೆಯ ಮೂಲಕ ಸೂರ್ಯನಿಂದ ತಮಸ್ಸು ನಿವಾರಿಲ್ಪಡುವಂತೆ ಯಥಾರ್ಥಸಂಗತಿಯನ್ನು ತಿಳಿಸುವ ಮಾಯಾವಾದಖಂಡನವೆಂಬ ಈ ಪ್ರಕರಣದ ಉಪದೇಶದ ಮೂಲಕವಾಗಿ ಸರ್ವಜ್ಞಮುನಿಯಿಂದ ಮಾಯಾವಾದವೆಲ್ಲವೂ ನಿರಾಕರಿಸಲ್ಪಟ್ಟಿತು. ಇದರಿಂದ ಸಜ್ಜನಾಧಿಕಾರಿಗಳ ಸಂಶಯಪರಿಹಾರವುಂಟಾಯಿತು. ಇಲ್ಲದಿದ್ದರೆ ಎಂದಿಗೂ ಈ ಸಂಶಯ ನಿವಾರಣೆಯಾಗುತ್ತಿರಲಿಲ್ಲ ಆದುದರಿಂದ ಈ ಸಂಶಯ ನಿವಾರಣವೇ ಈ ಪ್ರಕಣದ ಪ್ರಯೋಜನವಾಗಿರುತ್ತದೆ."

[ **ಟೀಕಾ** :- ಪ್ರಕರಣಾರ್ಥಮುಪಸಂಹರನ್ ತದನುಗುಣಂ ಭಗವದ್ವಾಕ್ಯಮೇವ ಪಠತಿ- ]

**ಪ್ರತಿಪದಾರ್ಥ** :- ಪ್ರಕರಣಾರ್ಥಂ = ಈ ಪ್ರಕರಣ ಗ್ರಂಥವನ್ನು ಉಪಸಂಹರನ್ = ಉಪಸಂಹರಿಸುತ್ತಾ, ತದನುಗುಣಂ = ವಿಷ್ಣುಸರ್ವೋತ್ತಮತ್ವವೇ ಸರ್ವಶಾಸ್ತ್ರಪ್ರತಿಪಾದ್ಯವೆಂಬ ಅರ್ಥವನ್ನೇ ಹೇಳುವ, ಭಗವದ್ವಾಕ್ಯಮೇವ = ಶ್ರೀ ವೇದವ್ಯಾಸದೇವರ ವಾಕ್ಯವನ್ನೇ, ಪಠತಿ = (ಶ್ರೀಮದಾಚಾರ್ಯರು) ಉಚ್ಚರಿಸುತ್ತಾರೆ.

[ **ಮೂಲ :-** ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ । ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ । ]

**ಪ್ರತಿಪದಾರ್ಥ :—** ನಾರಾಯಣಸಮಂ = ಶ್ರೀಮನ್ನಾರಾಯಣ ದೇವರ ಸಮಾನವಾದ ಬೇರೊಂದು ತತ್ವವು ನಾಸ್ತಿ = (ಈಗ) ಇರುವುದಿಲ್ಲ, ನ ಭೂತಂ = ಹಿಂದೆ ಇರಲಿಲ್ಲ, ನ ಭವಿಷ್ಯತಿ = ಮುಂದೆಯೂ ಇರುವುದಿಲ್ಲ ಏತೇನ ಸತ್ಯವಾಕ್ಯೇನ = ಯಥಾರ್ಥವಾದ ಈ ವಾಕ್ಯದಿಂದ, ಸರ್ವಾರ್ಥಾನ್ = ಸರ್ವಶಾಸ್ತ್ರಾರ್ಥವನ್ನು ಸಾದಯಾಮ್ಯಹಮ್ = ಸಮರ್ಥಿಸುತ್ತೇನೆ.

**ಭಾವಾರ್ಥ :-** ಈ ಗ್ರಂಥಾರ್ಥವನ್ನು ಉಪಸಂಹರಿಸಲಿಕ್ಕಾಗಿ ವಿಷ್ಣುಸರ್ವೋತ್ತಮತ್ವವೇ ಸರ್ವಶಾಸ್ತ್ರಪ್ರತಿಪಾದ್ಯ ವೆಂಬ ಅರ್ಥವನ್ನೇ ಹೇಳುವ ಶ್ರೀ ವೇದವ್ಯಾಸ ಮುನಿಗಳ 'ನಾಸ್ತಿ ನಾರಾಯಣಸಮಂ' ಇತ್ಯಾದಿ ರೂಪವಾದ ಭಾರತವಾಕ್ಯವನ್ನೇ ಗ್ರಂಥಾಂತ್ಯದಲ್ಲಿ ಆಚಾರ್ಯರು ಉಚ್ಚರಿಸುತ್ತಾರೆ.

ಭಾರತವಾಕ್ಯದ ಅರ್ಥ :— "ನಾರಾಯಣ ಸಮಾನವಾದ ಬೇರೊಂದು ತತ್ವವು ಈಗ ಇರುವುದಿಲ್ಲ. ಹಿಂದೆ ಇರಲಿಲ್ಲ ಮುಂದೆಯೂ ಇರಲಾರದು. ಈ ವಾಕ್ಯವು ಯಥಾರ್ಥವಾದ ಶ್ರೀಮನ್ನಾರಾಯಣನ ಸರ್ವೋತ್ತಮತ್ವವನ್ನು ಪ್ರತಿಪಾದಿಸುವಂತಹುದಾಗಿರುತ್ತದೆ. ಈ ವಾಕ್ಯದಿಂದ ನಾನು ಸರ್ವಶಾಸ್ತ್ರಾರ್ಥವನ್ನೂ ಸಮರ್ಥಿಸುತ್ತೇನೆ. ನಾರಾಯಣಸರ್ವೋತ್ತಮತ್ವವೇ ಸರ್ವಶಾಸ್ತ್ರಗಳ ಮುಖ್ಯಪ್ರತಿಪಾದ್ಯವಾಗಿರುವುದು. ಇದನ್ನು ತಿಳಿದವನು ಸರ್ವಶಾಸ್ತ್ರಾರ್ಥಜ್ಞಾನವುಳ್ಳವನಾಗುವನು ಎಂದು ತಾತ್ಪರ್ಯವಾಗಿರುತ್ತದೆ."

ಇತಿ ಶ್ರೀಮದಾನಂದ ಭಗವತ್ಪಾದಾಚಾರ್ಯವಿರಚಿತಂ

ಮಾಯಾವಾದಖಂಡನಂ ಸಂಪೂರ್ಣಂ



[ **ಟೀಕಾ :–** ವಚನಪ್ರಸೂನಮಾಲಾ ಜಯತೀರ್ಥಾಖ್ಯೇನ ಭಿಕ್ಷುಣಾ ರಚಿತಾ । ಧ್ರಿಯತಾಂ ಸದಯೇ
ಹೃದಯೇ ಕಮಲಾಮಹಿಲೇನ ಪುರುಷೇಣ । ]

**ಪ್ರತಿಪದಾರ್ಥ :–** ಜಯತೀರ್ಥಾಖ್ಯೇನ = ಜಯತೀರ್ಥ ಎಂಬ ಹೆಸರುಳ್ಳ, ಭಿಕ್ಷುಣಾ = ಭಿಕ್ಷುವಿನಿಂದ (ಸನ್ಯಾಸಿಗಳಿಂದ), ವಚನಪ್ರಸೂನಮಾಲಾ = ಈ ಮಾಯಾವಾದ ಖಂಡನ ಟೀಕಾ ಎಂಬ ಮಾಲೆಯು, ರಚಿತಾ = ರಚಿಸಲ್ಪಟ್ಟಿದೆ. ಕಮಲಾಮಹಿಲೇನ = ಕಮಲಾಪತಿಯಾದ, ಪುರುಷೇಣ = ಉತ್ತಮ ಪುರುಷನಾದ ಶ್ರೀಹರಿಯಿಂದ, ಸದಯೇ = ದಯೆಯಿಂದ ತುಂಬಿದ ಹೃದಯೇ = ತನ್ನ ಹೃದಯದಲ್ಲಿ, ಧ್ರಿಯತಾಂ = ಧರಿಸಲ್ಪಡಲಿ.

**ಭಾವಾರ್ಥ :–** ಶ್ರೀಮಂತನಿಗೆ ಯಾವ ವಸ್ತುವೂ ಅಲಭ್ಯವಲ್ಲ. ಆದರೂ ಭಕ್ತಿಯಿಂದ ಒಬ್ಬ ದರಿದ್ರನು ಒಂದು ಹೂಮಾಲೆಯನ್ನು ಅರ್ಪಿಸುತ್ತಾನೆ. ಶ್ರೀಮಂತನು ದಯಾಳುವಾಗಿದ್ದರೆ ಅದನ್ನು ಪ್ರೇಮದಿಂದ ತನ್ನ ಹೃದಯದಲ್ಲಿ ಧರಿಸಿಕೊಳ್ಳುತ್ತಾನೆ. ಜಯತೀರ್ಥನೆಂಬ ನಾನು ಭಿಕ್ಷುವಾಗಿದ್ದೇನೆ. ಶ್ರೀ ಹರಿಯು ಶ್ರೀವಲ್ಲಭನಾಗಿರುತ್ತಾನೆ. ಆದರೂ ಭಕ್ತಿಯಿಂದ ನಾನು ಅರ್ಪಿಸಿರುವ ಈ ಮಾಯಾವಾದ ಖಂಡನ ಟೀಕೆಯನ್ನು ದಯೆಯಿಂದ ತುಂಬಿದ ತನ್ನ ಹೃದಯದಲ್ಲಿ (ಅಂತಃಕರಣದಲ್ಲಿ) ದರಿದ್ರನು ಅರ್ಪಿಸಿದ ಹೂಮಾಲೆಯನ್ನು ಶ್ರೀಮಂತನು ಹೇಗೋ ಹಾಗೆ ಧರಿಸಿಕೊಳ್ಳಲಿ. (ಈ ಟೀಕಾ ರಚನೆಯು ಹರಿಯ ಚಿತ್ತಕ್ಕೆ ಪ್ರೀತಿಯನ್ನುಂಟುಮಾಡಲಿ ಎಂದು ತಾತ್ಪರ್ಯವಾಗಿದೆ).

ಇಲ್ಲಿಗೆ ಶ್ರೀಜಯತೀರ್ಥಭಿಕ್ಷುವಿರಚಿತವಾದ
ಮಾಯಾವಾದಖಂಡನದ ವಿವರಣವು ಮುಗಿಯಿತು.

ಶ್ರೀಕೃಷ್ಣಾರ್ಪಣಮಸ್ತು

